ಸ್ವಸ್ತಿಶ್ರೀ ೧೦೫ ಅತಿಬಲ ಗ್ರಂಥಮಾಲೆ ೧೪ ನೆಯ ಪುಷ್ಪ.



|| ಶ್ರೀವೀತರಾಗಾಯ ನಮಃ ||

# ಜೈನ ಸ್ತೋತ್ರಸಾರ ಸಮುಚ್ಚಯ.

ಮತ್ತು

# ಜೈನ ಧರ್ಮಾಮೃತಸಾರ.







ಆಶ್ರಯದಾತರು,

ಬಾಳಪ್ಪಾ ಭುಜಪ್ಪಾ ಹರದಿ, ಅಂಕಲಗಿ.

( ಪ್ರತಿ ೧೦೦೦. )

೧೯೫೪. ] [ ಬೆಲೆ ೪ ಆಣೆ.

# ಅನುಕ್ರಮಣಿಕೆ.



ಕೈ. ಕಮಲಾಬಾಯಿ ಬಾಳಪ್ಪಾ ಹರದಿ
ಅಂಕಲಗಿ.

# ಆಶ್ರಯದಾತರ ಪರಿಚಯ.



ಬಾಳಪ್ಪಾ ಭುಜಪ್ಪಾ ಹೆರದಿ ಮುಕ್ಕಾಮ ಅಂಕಲಗಿ ಇವರು ಸದರೀ ಅಂಕಲಗಿಯಲ್ಲಿ ಹೆರದಿ ಮನೆತನದವರು. ಕಮಲಾಬಾಯಿ ಅನ್ನುವವರು ಇವರ ಧರ್ಮಪತ್ನಿಯವರು. ಈ ದಂಪತಿಗಳು ಇರುತ್ತಿರುವಾಗ ಆಕಸ್ಮಾತ್ ಪತಿವ್ರತಾಶಿರೋಮಣಿಯಾದ ಕಮಲಾಬಾಯಿಯವರು ಸ್ವರ್ಗಸ್ಥರಾದರು. ಮುಂದೆ ಕೆಲಕಾಲ ಹೋಯಿತು. ನಂತರ ಅಕಸ್ಮಾತ್ ಅಂಕಲಗಿಗೆ ಸ್ವಸ್ತಿಶ್ರೀ ೧೦೫ ಜಿನಸೇನ ಮಹಾರಾಜರು, ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು ಹೋದಾಗ್ಗೆ ಧರ್ಮಾತ್ಮರಾದ ಕಮಲಾಬಾಯಿ ತೀರಿಕೊಂಡದ್ದು ಕೇಳಿ ಅವರ ಹೆಸರಿನಿಂದ ಶಾಸ್ತ್ರ ಮಾಡಿಸಬೇಕು. ಅಂತಾ ಹೇಳಿದ್ದರಿಂದ ಸದರೀ ಬಾಳಪ್ಪನವರು ಒಪ್ಪಿಕೊಂಡರು. ಅವರ ಜ್ಞಾನಾವರ್ಣ ಕರ್ಮ ನಾಶಗೋಸ್ಕರ ಕನ್ನಡದವರಿಗೂ ಮಹಾರಾಷ್ಟ್ರ ಭಾಷೆಯವರಿಗೂ ತಿಳಿಯುವಂತೆ ಜೈನ ಸ್ತೋತ್ರಸಾರ ಸಮುಚ್ಚಯ ಮತ್ತು ಜೈನ ಧರ್ಮಾಮೃತಸಾರ ಎಂಬ ಗ್ರಂಥದ ಒಂದು ಸಾವಿರ ಪ್ರತಿಗಳನ್ನೂ ಮತ್ತು ಒಂದು ಸಾವಿರ ಮರಾಠಿ ದರ್ಶನಪಾಠಗಳನ್ನೂ ಧರ್ಮಾರ್ಥ ಕೊಡಲಿಕ್ಕೆ ಪ್ರಿಂಟ ಮಾಡಿಸಿರುತ್ತಾರೆ. ಇವುಗಳನ್ನು ಚನ್ನಾಗಿ ಓದಿ ಅರ್ಥ ಸಹಿತ ತಿಳಕೊಂಡು ತಮ್ಮ ಆತ್ಮಕಲ್ಯಾಣ ಮಾಡಿಕೊಳ್ಳಬೇಕು. ಮತ್ತು ಸದರೀ ಬಾಳಪ್ಪಾ ಇವರಿಗೆ ಇದೇ ಪ್ರಕಾರ ಧರ್ಮವೃದ್ಧಿಯಾಗಲೆಂದು ನಾವು ಬೇಡಿಕೊಳ್ಳುತ್ತೇವೆ.





॥ ಶ್ರೀವೀತರಾಗಾಯ ನಮಃ ॥

# ಸ್ತೋತ್ರಸಾರ ಸಮುಚ್ಚಯ.



## ಮಂಗಲಾಚರಣ

ಶ್ರೀವೀರಂಪ್ರಣಿ ಪತ್ಯಾದೌ ಸ್ತೋತ್ರಸಾರ ಸಮುಚ್ಚಯಮ್ ।
ವಕ್ಷ್ಯೇಹಂಸಂಗ್ರಹಗ್ರಂಥಂ ಸರ್ವೇಷಾಂ ಹಿತಕಾರಕಮ್ ॥

**ಅರ್ಥಃ**— ಮೊದಲು ನಾನು ಶ್ರೀವರ್ಧಮಾನ ಸ್ವಾಮಿಯನ್ನು ನಮಸ್ಕರಿಸಿ ಸರ್ವರಿಗೂ ಹಿತವನ್ನುಂಟುಮಾಡುವ ಸ್ತೋತ್ರಸಾರ ಸಮುಚ್ಚಯವೆಂಬ ಸಂಗ್ರಹರೂಪವಾದ ಗ್ರಂಥವನ್ನು ಹೇಳುವೆನು.

## ॥ ಪ್ರಾತಃಕಾಲ ವಿಧಿಃ ॥

**ಪ್ರಾತರೇವ ಸಮುತ್ಥಾಯ ತಲ್ಪಾದ್ದಕ್ಷಿಣ ಪಾರ್ಶ್ವತಃ ॥**
**ನಿಷಣ್ಣಸ್ತತ್ರ ಪೂರ್ವಾಶ್ಯ ಏಕಾಗ್ರಶ್ಚಿಂತಯೇ ದಿತಿ ॥**

**ಅರ್ಥ:**—ಗೃಹಸ್ಥನು ಪ್ರಾತಃಕಾಲದಲ್ಲಿ ಬಲದ ಪಾರ್ಶ್ವದಿಂದ ಹಾಸಿಗೆಯಿಂದ ಎದ್ದು ಪೂರ್ವಾಭಿಮುಖನಾಗಿ ಹಾಸಿಗೆಯಲ್ಲಿ ಕುಳಿತು ಏಕಾಗ್ರ ಮನಸ್ಸುಳ್ಳವನಾಗಿ ಮುಂದೆ ಹೇಳುವಂತೆ ಆಲೋಚಿಸಬೇಕು.

ಅನಾದೌ ಘೋರ ಸಂಸಾರೇ ಭ್ರಾಂತ್ವಾಭ್ರಾಂತ್ವಾ ಕುಯೋನಿಷು ||
ಕಥಂ ಚಿಜ್ಜಿನಧರ್ಮೋಽಯಂ ಗೃಹಸ್ಥೀಯೋಽಮುಯಾ ಧೃತಃ ||೩ ||

ಅರ್ಥಃ—ಅನಾದಿಯೂ ಭಯಂಕರವೂ ಆದ ಸಂಸಾರದಲ್ಲಿ ಕೆಟ್ಟ ಯೋನಿಗಳಲ್ಲಿ ತಿರುಗಿ ತಿರುಗಿ ಬಹಳ ಪ್ರಯಾಸದಿಂದ ಜಿನೇಶ್ವರರಿಂದ ಹೇಳಲ್ಪಟ್ಟ ಗ್ರಹಸ್ಥ ಧರ್ಮವನ್ನು ನಾನು ಧರಿಸಿದೆನು.

ಅದ್ಯಾಪಿ ಭುವನಾರಾಧ್ಯೋ ಯತಿಧರ್ಮೋ ನಲಭ್ಯತೇ ||
ಹಂತ, ಚಾರಿತ್ರ ಮೋಹೇನಲಬ್ಧೋ ನಿರ್ವಾಹ್ಯತೇಧುನಾ|| ೪ ||

ಅರ್ಥಃ—ಚಾರಿತ್ರಮೋಹನೀಯವೆಂಬ ಕರ್ಮದ ಉದಯದಿಂದ ಲೋಕಪೂಜ್ಯವಾದ ಯತಿ-ಧರ್ಮವು ಈಗಲೂ ಲಭಿಸುವುದಿಲ್ಲವು. ಈಗ ನಾನು ಪ್ರಾರಂಭಿಸಿರುವ ಗ್ರಹಸ್ಥ ಧರ್ಮವನ್ನು ಚನ್ನಾಗಿ ನಡೆಯಿಸುತ್ತೇನೆ.

ಚಿಂತಯಿತ್ವೇತಿನಿರ್ದೋಷಂ ಸ್ತುತ್ವಾಸ್ತುತ್ವಾ ಜಿನೇಶ್ವರಮ್ ||
ವಂದಿತ್ವಾ ಚ ಪರಾ ವೃತ್ಯ ಕೃತಂ ಪೂರ್ವೇದ್ಯುರಾತ್ಮನಾ || ೫ ||

ಅರ್ಥ:—ಈ ಪ್ರಕಾರವಾಗಿ ಆಲೋಚಿಸಿ ದೋಷರಹಿತರಾದ ಜಿನೇಶ್ವರರನ್ನು ಬಾರಿಬಾರಿಗೂ ಸ್ತುತಿಸಿ ನಮಸ್ಕರಿಸಿ ಹಿಂದಿನ ದಿವಸ ತಾನು ಮಾಡಿದ ಕೆಲಸವನ್ನು ವಿಚಾರ ಮಾಡಿ—

ಕಾಲಂ ದೇಹಂ ಸ್ಥಿತಿಂ ದೇಶಂ ಶತ್ರುಂ ಮಿತ್ರಂ ಪರಿಗ್ರಹಮ್ ||
ಆಯಂ ವ್ಯಯಂ ಧನಂ ವೃತ್ತಿಂ ಧರ್ಮಂ ದಾನಾದಿಕಂ
ಸ್ಮರೇತ್ || ೬ ||

ಅರ್ಥ—ಕಾಲ, ತನ್ನ ಶರೀರಸ್ಥಿತಿ, ದೇಶ, ಶತ್ರು, ಮಿತ್ರ, ಪರಿಗ್ರಹ, ಆಯ, ವ್ಯಯ, ಧನ, ಜೀವನೋಪಾಯ, ಧರ್ಮ, ದಾನ, ಮೊದಲಾದುವುಗಳನ್ನು ವಿಚಾರ ಮಾಡಬೇಕು.

## || ಅಥ ನಮಸ್ಕಾರ ಮಂತ್ರಃ ||

ಣಮೋ ಅರಹಂತಾಣಂ । ಣಮೋಸಿದ್ಧಾಣಂ ।
ಣಮೋ ಆಇರಿಯಾಣಂ । ಣಮೋಉವಜ್ಝಾಯಾಣಂ ।
ಣಮೋ ಲೋಏ ಸವ್ವಸಾಹೂಣಂ || ೩೫ ||
ಅರಹಂತ ಸಿದ್ಧ ಆಇರಿಯಾ ಉವಜ್ಝಾಯಾ ಸಾಹು || ೧೬ ||

ಅರಹಂತಸಿಸಾ || ೬ || ಅರಹಂತ ಸಿದ್ಧ || ೬ || ಓಂನಮಃ
ಸಿದ್ಧೇಭ್ಯಃ || ೬ || ಅಸಿಆಉಸಾ || ೫ || ಅಸಿಸಾಹು || ೪ ||
ಅರಹಂತ || ೪ || ಅಸಾ || ೨ || ಸಿದ್ಧ || ೨ || ಓಂ || ೧ ||

ಪದ್ಯ—ಮಂತ್ರಂ ಸಂಸಾರಸಾರಂ ತ್ರಿಜಗದನುಪಮಂ ಸರ್ವ ಪಾಪಾರಿ
ಮಂತ್ರಂ || ಸಂಸಾರೋಚ್ಛೇದಮಂತ್ರಂ ವಿಷಮವಿಷಹರಂ
ಕರ್ಮನಿರ್ಮೂಲ ಮಂತ್ರಂ || ಮಂತ್ರಂ ಸಿದ್ಧಿಪ್ರಧಾನಂ ಶಿವ
ಸುಖ ಜನನಂ ಕೇವಲಜ್ಞಾನ ಮಂತ್ರಂ || ಮಂತ್ರಂ ಶ್ರೀಜೈನ
ಮಂತ್ರಂ ಜಪ ಜಪ ಜಪಿತಂ ಜನ್ಮ ನಿರ್ವಾಣ ಮಂತ್ರಂ ||೧||

ಅರ್ಥಃ—ಈ ಪಂಚ ನಮಸ್ಕಾರ ಮಂತ್ರವು ಸಂಸಾರದಲ್ಲಿ, ಸಾರವಾದದ್ದು, ಮೂರು ಲೋಕದಲ್ಲಿ ಉಪಮಾರಹಿತವೂ, ಪಾಪಗಳಿಗೆಲ್ಲ ಶತ್ರುವಾದ ಮಂತ್ರವೂ ಸಂಸಾರವನ್ನು ನಾಶಮಾಡುವ ಮಂತ್ರವೂ, ಕ್ರೂರವಾದ ವಿಷಯವನ್ನು ನಾಶಮಾಡುವ ಮಂತ್ರವೂ, ಕರ್ಮವನ್ನು ನಿರ್ಮೂಲ ಮಾಡುವ ಮಂತ್ರವೂ, ಸಮಸ್ತವಾದ ಇಷ್ಟಸಿದ್ಧಿಯನ್ನುಂಟು ಮಾಡುವ ಮಂತ್ರವೂ ಮೋಕ್ಷವನ್ನುಂಟುಮಾಡುವ ಮಂತ್ರವೂ, ಕೇವಲ ಜ್ಞಾನವನ್ನುಂಟು ಮಾಡುವ ಮಂತ್ರವೂ, ಆಗಿದೆ. ಶ್ರೀಜಿನೇಶ್ವರರ ಸಂಬಂಧವಾದ ಈ ಮಂತ್ರವನ್ನು ಜಪಿಸು ಜಪಿಸು. ಹೀಗೆ ಜಪಿಸಲ್ಪಟ್ಟ ಈ ಪಂಚನಮಸ್ಕಾರ ಮಂತ್ರವು ಜನನ–ಮರಣಗಳನ್ನು ದೂರಮಾಡುತ್ತದೆ.

ಆಕೃಷ್ಟಿಂ ಸುರಸಂಪದಾಂ ವಿದಧತೇ ಮುಕ್ತಿ ಶ್ರೀಯೋವಶ್ಯತಾಂ ಉಚ್ಚಾಟಂ ವಿಪದಾಂ ಚತುರ್ಗತಿ ಭುವಾಂ ವಿದ್ವೇಷ ಮಾತ್ಮೈನ ಸಾವತ್ ॥ ಸ್ತಂಭಂ ದುರ್ಗಮನಂ ಪ್ರತಿಪ್ರಯತತೋಮೋಹಸ್ಯ ಸಮ್ಮೋಹನಂ ॥ ಪಾಯಾತ್ಪಂಚ ನಮಸ್ಕ್ರಿಯಾಕ್ಷರಮಯೀಸಾ ರಾಧನಾ ದೇವತಾ ॥ ೨ ॥

ಅರ್ಥ:—ಯಾವ ಮಂತ್ರವು ಅವಶ್ಯವಾಗಿ ದೇವ ಸಂಪತ್ತನ್ನುಂಟು ಮಾಡುವದೂ, ಮೋಕ್ಷಲಕ್ಷ್ಮಿಯನ್ನು ವಶಪಡಿಸುವದೂ, ಚತುರ್ಗತಿಜನ್ಯ ವಾದ ವಿಪತ್ತುಗಳನ್ನು ದೂರ ಮಾಡುವದೂ, ಆತ್ಮನ ಪಾಪಗಳಿಗೆ ಶತ್ರುವೂ ದುರ್ಗತಿ ಗಮನವನ್ನು ತಡೆವುದಕ್ಕೆ ಸ್ತಂಬವೂ, ಪ್ರಯತ್ನಶೀಲ ವಾದ ಮೋಹವನ್ನು ನಾಶಮಾಡುವದು ಆಗಿದೆಯೋ ಅಂತಹ ಪಂಚನಮ ಸ್ಕಾರಾಕ್ಷರಮಯವು ಆರಾಧಿಸುವದಕ್ಕೆ ಯೋಗ್ಯವೂ ಆದ ಮಂತ್ರದೇವ ತೆಯು ನಮ್ಮನ್ನು ರಕ್ಷಿಸಲಿ.

ಆಮೇಲೆ ತ್ರಿಕಾಲತೀರ್ಥಂಕರರನ್ನು ನಮಸ್ಕರಿಸುವದು.

## ತ್ರಿಕಾಲ ತೀರ್ಥಂಕರ.

ನಿರ್ವಾಣ, ಸಾಗರ, ಮಹಾಸಾಧು, ವಿಮಲಪ್ರಭ, ಶ್ರೀಧರ, ಸುದತ್ತ, ಅಮಲಪ್ರಭ, ಉದ್ಧರ, ಅಂಗೀರ, ಸನ್ಮತಿ, ಸಿಂಧು, ಕುಸು ಮಾಂಜಲಿ, ಶಿವಗಣ, ಉತ್ಸಾಹ, ಜ್ಞಾನೇಶ್ವರ, ಪರಮೇಶ್ವರ, ವಿಮಲೇ ಶ್ವರ, ಯಶೋಧರ, ಕೃಷ್ಣ, ಜ್ಞಾನಮತಿ, ಶುದ್ಧಮತಿ, ಶ್ರೀಭದ್ರ, ಅತಿಕ್ರಾಂತ, ಶಾಂತಾಶ್ಚೇತಿ ಭೂತಕಾಲ ಸಂಬಂಧಿ ಚತುರ್ವಿಂಶತಿ ತೀರ್ಥಂಕರೇಭ್ಯೋ ನಮೋನಮಃ

ವೃಷಭ, ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸು ಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನಾಶ್ಚೇತಿ, ವರ್ತಮಾನ ಕಾಲಸಂಬಂಧೀ ಚತುರ್ವಿಂಶತಿ ತೀರ್ಥಂಕರೇಭ್ಯೋ ನಮೋ ನಮಃ

ಮಹಾಪದ್ಮ, ಸುರದೇವ, ಸುಪಾರ್ಶ್ವ, ಸ್ವಯಂಪ್ರಭ, ಸರ್ವಾತ್ಮ ಭೂತ, ದೇವಪುತ್ರ, ಕುಲಪುತ್ರ, ಉದಂಕ, ಪ್ರೌಷ್ಟಿಲ, ಜಯಕೀರ್ತಿ ಮುನಿಸುವ್ರತ, ಅರ, ನಿಷ್ಪಾಪ, ನಿಷ್ಕಷಾಯ ವಿಪುಲ, ನಿರ್ಮಲ, ಚಿತ್ರಗುಪ್ತ, ಸಮಾಧಿಗುಪ್ತ, ಸ್ವಯಂಭೂ, ಅನುವೃತ್ತಕ, ಜಯ, ವಿಮಲ, ದೇವಪಾಲ, ಅನಂತವೀರ್ಯಾಶ್ಚೇತಿ ಭವಿಷತ್ಕಾಲ ಸಂಬಂಧಿ ಚತುರ್ವಿಂಷತಿ ತೀರ್ಥಂಕರಭ್ಯೋ ನಮೋನಮಃ—

## ದರ್ಶನ ಸ್ತುತಿ

**ಗೀರ್ವಾಣರಾಜ ಪರಿಪೂಜಿತ ಜೈನರಾಜ ರಾಜೀವಹಾಸಿ ಚರಣ ದ್ವಯ ಪೂಜನಾರ್ಥಂ ॥ ಬಿಭೃದ್ಗಿರೀಂದ್ರ ಜಿನವೇಶ್ಮಕ ವಾಟ ಲಕ್ಷ್ಮೀಂಪ್ರೋದ್ಘಾಟ್ಯತಿ ಪ್ರವರ ವಿಷಮಯಾಕವಾಟಃ ॥ ೧ ॥**

ಅರ್ಥಃ—ದೇವೇಂದ್ರನಿಂದ ಪೂಜಿಸಲ್ಪಟ್ಟ ಜಿನೇಶ್ವರರ ಸಂಬಂಧಿಯೂ ಪ್ರಕಾಶಮಾನವಾದ ತಾವರೆಗಿಂತ ಶ್ರೇಷ್ಟವೂ ಆದ ಎರಡು ಪಾದಗಳ ಪೂಜೆಗೋಸ್ಕರ ಮೇರು ಪರ್ವತದಲ್ಲಿರುವ ಜಿನಮಂದಿರಗಳ ಸಂಬಂಧಿಯಾದ ಶೋಭೆಗಳನ್ನು ಧರಿಸುವದು ಶ್ರೇಷ್ಠವೂ ಆದ ಜಿನಾಲಯದ ಬಾಗಿಲವನ್ನು ನಾನು ತೆರೆಯುತ್ತೇನೆ

**ಇತಿ ಕಾವಾಟೋದ್ಘಾಟನಂ ॥ ಜಿನರಾಜ ಗೃಹದ್ವಾರ ಪಾಲಕಾಃ॥ ಪಾರ್ಥಯಾಮಿವಃ ॥ ಜಿನಪೂಜಾ ವಿಧಾನಾರ್ಥಂಗ ಮಿಷ್ಯಾಮಿಜಿ ನಾಯವಾ ॥ ೨ ॥**

ಅರ್ಥಃ—ಜಿನೇಶ್ವರರ ಮಂದಿರದ ದ್ವಾರಪಾಲಕರೇ ನಿಮ್ಮನ್ನು ಪ್ರಾರ್ಥಿಸುತ್ತೇನೆ. ನಾನು ಜಿನೇಶ್ವರರ ಪೂಜೆಯನ್ನು ಮಾಡುವದಕ್ಕೋಸ್ಕರ ಜಿನಮಂದಿರಕ್ಕೆ ಹೋಗುವೆನು.

ನಿಸಂಗೋಽಹಂ ಜಿನಾನಾಂ ಸದನಮನುಪಮಂತ್ರಿಃಪರಿತ್ಯೈತ್ಯ ಭಕ್ತ್ಯಾಸ್ಥಿತ್ವಾ ಗತ್ವಾ ನಿಷದ್ಯೋಚ್ಚರಣ ಪರಿಣತೋಂತಃ ಶನ್ಯೈ **ರ್ಹಸ್ತಯುಗ್ಮಮ್॥ ಭಾಲೇಸಂಸ್ಥಾಪ್ಯಬುದ್ಧ್ಯಾಮಮದುರಿತಹರಂ**

ಕೀರ್ತಿಯೇ ಶಕ್ರವಂದ್ಯಂ|| ನಿಂದಾದೂರಂ ಸದಾಪ್ತಂ ಕ್ಷಯರಹಿತ
ಮಮುಂ ಜ್ಞಾನಭಾನುಂ ಜಿನೇಂದ್ರಂ || ೩ ||

ಅರ್ಥ:—ಪರಿಗ್ರಹ ರಹಿತನಾದ ನಾನು ಉಪಮಾರಹಿತವಾದ ಜಿನ ಮಂದಿರವನ್ನು ಭಕ್ತಿಯಿಂದ ಮೂರು ಪ್ರದಕ್ಷಣೆ ಬಂದಿದ್ದು ದೇವಾಲಯದ ಸ್ತುತಿಯಲ್ಲಿ ಆಸಕ್ತನಾಗಿ ಮೆಲ್ಲಗೆ ದೇವಾಲಯದೊಳಗೆ ಹೋಗಿ ಕೈಗಳೆರಡನ್ನೂ ಹಣೆಯ ಮೇಲಿಟ್ಟು, ನನ್ನ ಪಾಪವನ್ನು ನಾಶಮಾಡುವವನೂ ದೇವೇಂದ್ರನಿಂದ ವಂದಿಸಲ್ಪಡುವವನೂ ನಿಂದಾರಹಿತನೂ ಹಿತೋಪದೇಶಕನೂ ನಾಶರಹಿತನೂ ಜ್ಞಾನವೆಂಬ ಸೂರ್ಯನುಳ್ಳವನೂ ಆದ ಈ ಜಿನೇಶ್ವರನನ್ನು ಯಾವಾಗಲೂ ಬುದ್ಧಿಯಿಂದ ಸ್ತುತಿಸುತ್ತೇನೆ.

ದರ್ಶನಂ ದೇವದೇವಶ್ಯ ದರ್ಶನಂ ಪಾಪನಾಶನಮ್ ||
ದರ್ಶನಂ ಸ್ವರ್ಗಸೋಪಾನಂ ದರ್ಶನಂ ಮೋಕ್ಷಸಾಧನಮ್ ||೪||

ಅರ್ಥ:— ದೇವಾಧಿದೇವನಾದ ಜಿನೇಶ್ವರನ ದರ್ಶನವು ಪಾಪವನ್ನು ನಾಶಮಾಡುವದು ಸ್ವರ್ಗಕ್ಕೆ ಮೆಟ್ಟಲಾಗಿದೆ. ಮೋಕ್ಷಕ್ಕೆ ಕಾರಣವಾಗಿದೆ.

ದರ್ಶನೇನ ಜಿನೇಂದ್ರಾಣಾಂ ಸಾಧೂನಾಂ ವಂದನೇನಚ ||
ನಚಿರಂ ತಿಷ್ಟತೇ ಪಾಪಂ ಛಿದ್ರಹಸ್ತೇಯಥೋದಕಂ || ೫ ||

ಅರ್ಥ:—ಜಿನೇಶ್ವರರ ದರ್ಶನದಿಂದಲೂ ಮಹಾಮುನಿಗಳ ವಂದನೆಯಿಂದಲೂ ಛಿದ್ರಹಸ್ತದಲ್ಲಿ ನೀರಿನಂತೆ, ಪಾಪವು ಹೆಚ್ಚು ಕಾಲದವರೆಗೆ ಸ್ಥಿರವಾಗಿರುವದಿಲ್ಲವು.

ವೀತರಾಗಮುಖಂ ದೃಷ್ಟ್ವಾ ಪದ್ಮರಾಗ ಸಮಪ್ರಭಂ ||
ನೈಕ ಜನ್ಮ ಕೃತಂ ಪಾಪಂ ದರ್ಶನೇನ ವಿನಶ್ಯತಿ || ೬ ||

ಅರ್ಥ:—ಪದ್ಮರಾಗರತ್ನಕ್ಕೆ ಸಮಾನವಾದ ಕಾಂತಿಯುಳ್ಳ ವೀತರಾಗಜಿನೇಶ್ವರರ ಮುಖವನ್ನು ನೋಡಿ ಆ ದರ್ಶನದಿಂದ ಅನೇಕ ಜನ್ಮಗಳಲ್ಲಿ ಮಾಡಲ್ಪಟ್ಟ ಪಾಪವು ನಾಶವಾಗುತ್ತದೆ.

ಪದ್ಯ—ದರ್ಶನಂ ಜಿನಸೂರ್ಯಸ್ಯ ಸಂಸಾರ ಧ್ವಾಂತ ನಾಶನಂ ||
ಬೋಧನಂ ಚಿತ್ತ ಪದ್ಮಸ್ಯ ಸಮಸ್ತಾರ್ಥಪ್ರಕಾಶನಂ || ೭ ||

ಅರ್ಥಃ—ಜಿನೇಶ್ವರನೆಂಬ ಸೂರ್ಯನ ದರ್ಶನವು ಸಂಸಾರವೆಂಬ ಗಾಢಾಂಧಕಾರವನ್ನು ನಾಶಮಾಡತಕ್ಕದ್ದು. ಮನಸ್ಸೆಂಬ ಕಮಲವನ್ನ ರಳಿಸುವದು. ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸತಕ್ಕದ್ದು.

**ದರ್ಶನಂ ಜಿನ ಚಂದ್ರಸ್ಯ ಸದ್ಧರ್ಮಾಮೃತ ವರ್ಷಣಂ ||**
**ಜನ್ಮದಾಹ ವಿನಾಶಾಯ ವರ್ಧನಂ ಸುಖವಾರಿಧೇಃ || ೮ ||**

ಅರ್ಥಃ-ಜಿನೇಶ್ವರನೆಂಬ ಚಂದ್ರನ ದರ್ಶನವು ಜನ್ಮವೆಂಬ ತಾಪದ ನಾಶಕ್ಕೆ ಸದ್ಧರ್ಮವೆಂಬ ಅಮೃತ ಮಳೆಯಾಗಿದೆ. ಸುಖವೆಂಬ ಸಮುದ್ರ ವನ್ನು ವೃದ್ಧಿಪಡಿಸುವದಾಗಿದೆ.

**ಜೀವಾದಿ ತತ್ವಪ್ರತಿದರ್ಶಕಾಯ ಸಮ್ಯಕ್ತ್ವ ಮುಖ್ಯಾಷ್ಟ**
**ಗುಣಾಶ್ರಯಾಯ ||**
**ಪ್ರಶಾಂತ ರೂಪಾಯ ದಿಗಂಬರಾಯ ದೇವಾಧಿ ದೇವಾಯ**
**ನಮೋ ಜಿನಾಯ || ೯ ||**

ಅರ್ಥಃ—ಜೀವಾದಿ ವಸ್ತುಗಳ ಸ್ವರೂಪವನ್ನು ತೋರಿಸುವವನೂ ಸಮ್ಯಕ್ತ್ವ ಮೊದಲಾದೆಂಟು ಗುಣಗಳಿಗಾಶ್ರಯನೂ ಬಹಳ ಶಾಂತ ಸ್ವರೂಪನೂ ದಿಗಂಬರನೂ ದೇವಾದಿದೇವನೂ ಆದ ಜಿನೇಶ್ವರನಿಗೆ ನಮಸ್ಕಾರವು.

ಚಿದಾನಂದೈಕ ರೂಪಾಯ ಜಿನಾಯ ಪರಮಾತ್ಮನೇ ||
ಪರಮಾತ್ಮ ಪ್ರಕಾಶಾಯ ನಿತ್ಯಂ ಸಿದ್ಧಾತ್ಮನೇನಮಃ || ೧೦ ||

**ಅರ್ಥಃ**—ಚಿದಾನಂದ ಸ್ವರೂಪಿಯೂ ಕರ್ಮ ಶತ್ರುಗಳನ್ನು ಜಯಿಸಿದವನೂ ಪರಮಾತ್ಮನೂ ಪರಮಾತ್ಮರೂಪವಾದ ಪ್ರಕಾಶವುಳ್ಳವನೂ ಆದ ಸಿದ್ಧಾತ್ಮನಿಗೆ ಯಾವಾಗಲೂ ನಮಸ್ಕಾರವಿರಲಿ.

ಅನಂತಾನಂತ ಸಂಸಾರ ಸಂತತಿಚ್ಛೇದ ಕಾರಣಂ ||
ಜಿನರಾಜ ಪದಾಂಭೋಜ ಸ್ಮರಣಂ ಶರಣಂ ಮಮ || ೧೧ ||

**ಅರ್ಥಃ**—ಅನಂತಾನಂತವಾದ ಸಂಸಾರಪರಂಪರೆಯ ನಾಶಕ್ಕೆ ಕಾರಣವಾದ ಜಿನೇಶ್ವರನ ಪಾದಕಮಲಗಳ ಸ್ಮರಣೆಯು ನನಗೆ ಶರಣವು.

ಅನ್ಯಥಾಶರಣಂ ನಾಸ್ತಿತ್ವಮೇವ ಶರಣಂ ಮಮ ||
ತಸ್ಮಾತ್ಕಾರುಣ್ಯ ಭಾವೇನ ರಕ್ಷ ರಕ್ಷ ಜಿನೇಶ್ವರ || ೧೨ ||

**ಅರ್ಥಃ**—ಜಿನೇಶ್ವರನೇ ! ನನಗೆ ಬೇರೆ ವಿಧವಾಗಿ ಶರಣವಿಲ್ಲವು ನೀನೇ ನನಗೆ ಶರಣವು. ಆದುದರಿಂದ ಕಾರುಣ್ಯಭಾವದಿಂದ ನನ್ನನ್ನು ಕಾಪಾಡು ಕಾಪಾಡು.

ನಹಿತ್ರಾತಾ ನಹಿತ್ರಾತಾ ನಹಿತ್ರಾತಾ ಜಗತ್ರಯೇ ||
ವೀತರಾಗಾತ್ಪರೋದೇವೋ ನಭೂತೋ ನಭವಿಷ್ಯತಿ || ೧೩ ||

ಅರ್ಥಃ—ಮೂರು ಲೋಕದಲ್ಲಿಯೂ ವೀತರಾಗನ ಹೊರತು ರಕ್ಷಕ ನಿಲ್ಲವು. ರಕ್ಷಕನಿಲ್ಲವು. ರಕ್ಷಕನಿಲ್ಲವು. ವೀತರಾಗನ ಹೊರತು ಬೇರೆ ದೇವನೂ ಹಿಂದೆ ಆಗಲಿಲ್ಲ. ಮುಂದೆ ಆಗುವದಿಲ್ಲವು.

ಜಿನೇಭಕ್ತಿರ್ಜಿನೇಭಕ್ತಿರ್ಜಿನೇಭಕ್ತಿರ್ದಿನೇದಿನೇ ||
ಸದಾಮೇಸ್ತುಸದಾಮೇಸುಸದಾಮೇಸ್ತು ಭವೇ ಭವೇ || ೧೪ ||

ಅರ್ಥ:—ಭವ ಭವದಲ್ಲಿಯೂ ಪ್ರತಿದಿವಸದಲ್ಲಿಯೂ ಯಾವಾಗಲೂ ನನಗೆ ಜಿನೇಶ್ವರನಲ್ಲಿ ಭಕ್ತಿಯುಂಟಾಗಲಿ ಭಕ್ತಿಯುಂಟಾಗಲಿ ಭಕ್ತಿಯುಂಟಾಗಲಿ.

ವಿಘ್ನೌಘಾಃ ಪ್ರಲಯಂ ಯಾಂತಿ ಶಾಕಿನೀಭೂತ ಪನ್ನಗಾಃ ||
ವಿಷಂ ನಿರ್ವಿಷತಾಂಯಾಂತಿ ಸ್ತೂಯಮಾನೇ ಜಿನೇಶ್ವರೇ ||೧೫||

ಅರ್ಥ:—ಜಿನೇಶ್ವರರನ್ನು ಸ್ತೋತ್ರ ಮಾಡಿದರೆ ವಿಘ್ನಸಮೂಹಗಳೆಲ್ಲ ನಾಶವಾಗುತ್ತವೆ. ಶಾಕಿನೀ, ಭೂತ, ಸರ್ಪ, ಇವು ಇವುಗಳು ದೂರವಾಗುತ್ತವೆ. ವಿಷವು ನಿರ್ವಿಷವಾಗುತ್ತದೆ.

ಜನ್ಮ ಜನ್ಮ ಕೃತಂ ಪಾಪಂ ಜನ್ಮಕೋಟ್ಯಾಮುಪಾರ್ಜಿತಂ ||
ಜನ್ಮಮೃತ್ಯು ಜರಾತಂಕ ಹನ್ಯತೇಜಿನ ದರ್ಶನಾತ್ || ೧೬ ||

ಅರ್ಥ:—ಜನ್ಮ ಜನ್ಮಗಳಲ್ಲಿ ಮಾಡಲ್ಪಟ್ಟದೂ ಅನೇಕ ಜನ್ಮಗಳಲ್ಲಿ ಸಂಪಾದಿಸಲ್ಪಟ್ಟದೂ ಜನ್ಮಜರಾ ಮರಣಗಳಿಗೆ ಕಾರಣವೂ ಆದ ಪಾಪವೂ ಜಿನೇಶ್ವರನ ದರ್ಶದಿಂದ ನಾಶವಾಗುತ್ತದೆ.

# ಜಿನಾಲಯ ಸ್ತುತಿ ೮ ನೆಯು.

ದೃಷ್ಟಂ ಜಿನೇಂದ್ರ ಭವನಂ ಭವತಾಪಹಾರಿ ಭವ್ಯಾತ್ಮನಾಂ
ವಿಭವ ಸಂಭವ ಭೂರಿಹೇತುಃ ।। ದುಗ್ಧಾಬ್ಧಿಫೇನ ಧವಲೋ
ಜ್ವಲಕೂಟ ಕೋಟೀನದ್ಧಧ್ವಜ ಪ್ರಕರರಾಜಿವಿ ರಾಜಮಾನಂ ।೧।

ದೃಷ್ಟಂ ಜಿನೇಂದ್ರ ಭವನಂ ಭುವನೈಕ ಲಕ್ಷ್ಮೀ ।
ಧಾಮರ್ದ್ಧಿ ವರ್ಧಿತ ಮಹಾಮುನಿ ಸೇವ್ಯಮಾನಂ ॥
ವಿದ್ಯಾಧರಾಮರ ವಧೂ ಜನಮುಕ್ತ ದಿವ್ಯ ।
ಪುಷ್ಪಾಂಜಲಿ ಪ್ರಕರ ಶೋಭಿತ ಭೂಮಿ ಭಾಗಂ ॥ ೨ ॥

ಅರ್ಥ:—ಲೋಕದಲ್ಲಿ ಸಂಪತ್ತಿಗೆ ಮುಖ್ಯಸ್ಥಾನವೂ, ಋದ್ಧಿಸಂಪನ್ನರಾದ ಮಹಾಮುನಿಗಳಿಂದ ಸೇವಿಸಲ್ಪಡುವದೂ, ವಿದ್ಯಾಧರ ಸ್ತ್ರೀಯರೂ ದೇವಸ್ತ್ರೀಯರೂ, ಸುರಿದ ಪುಷ್ಪಾಂಜಲಿಗಳ ಸಮೂಹಗಳಿಂದ ಶೋಭಾಯಮಾನವಾದ ಭೂಮಿಯುಳ್ಳದೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ಭವನಾದಿವಾಸ ।
ವಿಖ್ಯಾತ ನಾಕಗಣಿಕಾ ಗಣಗೀಯಮಾನಂ ॥
ನಾನಾಮಣಿ ಪ್ರಚಯ ಭಾಸುರ ರಶ್ಮಿ ಜಾಲ ।
ವ್ಯಾಲೀಢ ನಿರ್ಮಲ ವಿಶಾಲ ಗವಾಕ್ಷಜಾಲಂ ॥ ೩ ॥

ಅರ್ಥಃ—ಭವನ ಲೋಕದಲ್ಲಿ ವಾಸ ಮಾಡುವ ಪ್ರಖ್ಯಾತರಾದ ನಾಗ ಗಣಿಕಾ ಸ್ತ್ರೀಯರಿಂದ ಗಾನ ಮಾಡಲ್ಪಡುವದೂ, ಅನೇಕ ಪ್ರಕಾರವಾದ ರತ್ನಗಳ ಸಮೂಹದ ಪ್ರಕಾಶಮಾನವಾದ ಕಿರಣಗಳ ಸಮೂಹದಿಂದ ವ್ಯಾಪ್ತವೂ ನಿರ್ಮಲವೂ ವಿಶಾಲವೂ ಆದ ಕಿಡಿಕಿಗಳ ಸಮೂಹವುಳ್ಳದೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ಸುರಸಿದ್ಧ ಯಕ್ಷ ।
ಗಂಧರ್ವ ಕಿನ್ನರ ಕರಾರ್ಪಿತ ವೇಣುವೀಣಾ ॥

ಸಂಗೀತ ಮಿಶ್ರಿತ ನಮಸ್ಕೃತ ಧೀರನಾದ್ಯೈ ।
ರಾಪೂರಿತಾಂಬರತಲೋರುದಿಗಂತರಾಲಂ ॥ ೪ ॥

ಅರ್ಥಃ–ಸುರರೂ ಸಿದ್ಧದೇವತೆಗಳೂ ಯಕ್ಷರೂ, ಗಂಧರ್ವರೂ, ಕಿನ್ನರರೂ, ಕೈಗಳಲ್ಲಿ ಧರಿಸಿರುವ ಕೊಳಲು, ವೀಣೆಗಳುಳ್ಳದೂ, ಸಂಗೀತದೊಡನೆ ನಮಸ್ಕಾರವನ್ನು ಮಾಡುವಾಗುಂಟಾದ ಗಂಭೀರಶಬ್ದಗಳಿಂದ ಆಕಾಶವನ್ನೂ ದಿಕ್ಕುಗಳನ್ನೂ ತುಂಬಿರುವುದೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ವಿಲಸದ್ವಿಲೋಲ ।
ಮಾಲಾಕುಲಾಲಿಲಲಿತಾಲಕಬಿಭ್ರಮಾಣಂ ॥
ಮಾಧುರ್ಯ ವಾದ್ಯಲಯ ನೃತ್ಯವಿಲಾಸಿನೀನಾಂ ।
ಲೀಲಾಚಲದ್ವಲಯ ನೂಪುರ ನಾದರಮ್ಯಂ ॥ ೫ ॥

ಅರ್ಥಃ—ಪ್ರಕಾಶಮಾನವೂ, ಚಂಚಲವೂ ಆದ ಪುಷ್ಪಮಾಲೆಗಳಲ್ಲಿ ಸಂಬಂಧಿಸಿರುವ ಭ್ರಮರಗಳೆಂಬ ಮನೋಹರವಾದ ಕುರುಳು ಕೂದಲುಗಳನ್ನು ಧರಿಸುವದೂ, ಮಧುರವಾದ ವಾದ್ಯಗಳುಳ್ಳವರೂ ಲಯಕ್ಕನುಸಾರವಾಗಿ ನೃತ್ಯವನ್ನು ಮಾಡುವವರೂ ಆದ ವಿಲಾಸವತೀ ಸ್ತ್ರೀಯರ ಲೀಲೆಯಿಂ ಚಲಿಸುತ್ತಿರುವ ಕಂಕಣಪಾದ ಕಡಗಗಳ ಶಬ್ದದಿಂದ ಮನೋಹರವೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ಮಣಿರತ್ನ ಹೇಮ ।
ಸಾರೋಜ್ಜ್ವಲೈಃ ಕಲಶ ಚಾಮರ ದರ್ಪಣಾದ್ಯೈಃ ॥
ಸನ್ಮಂಗಲೈಃ ಸತತಮಷ್ಟಶತ ಪ್ರಭೇದೈ ।
ರ್ವಿಬ್ರಾಜಿತಂ ವಿಮಲ ಮೌಕ್ತಿಕದಾಮ ಶೋಭಂ ॥ ೬ ॥

ಅರ್ಥ:—ಶ್ರೇಷ್ಠವಾದ ಮಣಿಗಳಿಂದಲೂ ರತ್ನಗಳಿಂದಲೂ ಬಂಗಾರದಿಂದಲೂ ದೇದೀಪ್ಯಮಾನವಾದ ನೂರೆಂಟು ಭೇದಗಳುಳ್ಳ ಕಲಶ, ಚಾಮರ, ಕನ್ನಡಿ ಮೊದಲಾದ ಮಂಗಳ ದ್ರವ್ಯಗಳಿಂದ ಯಾವಾಗಲೂ

ಪ್ರಕಾಶಮಾನವೂ, ನಿರ್ಮಲವಾದ ಮುಕ್ತಾಹಾರಗಳ ಶೋಭೆಯುಳ್ಳುದೂ ಆದ ಜಿನಮಂದಿರವನ್ನು ನೋಡಿದನು.

ದೃಷ್ಟಂ ಜಿನೇಂದ್ರ ಭವನಂ ವರದೇವದಾರು ।
ಕರ್ಪೂರ ಚಂದನ ತರುಷ್ಕ ಸುಗಂಧಿ ಧೂಪ್ಯೈಃ ॥
ಮೇಘಾಯ ಮಾನಗಗನೇ ಪವನಾಭಿಘಾತ ।
ಚಂಚಚ್ಚಲ ದ್ವಿಮಲ ಕೇತನ ತುಂಗಶಾಲಂ ॥ ೭ ॥

ಅರ್ಥಃ—ಶ್ರೇಷ್ಠವಾದ ದೇವದಾರು, ಕರ್ಪೂರ, ಚಂದನ, ಹಾಲು ಮಡ್ಡಿ ಮೊದಲಾದ ಸುಗಂಧಧೂಪಗಳಿಂದ ಮೇಘದಂತೆ ತೋರುತ್ತಿರುವ ಆಕಾಶದಲ್ಲಿ ಗಾಳಿಯ ಹೊಡೆತದಿಂದ ಚಲಿಸುತ್ತಿರುವ ನಿರ್ಮಲವಾದ ಧ್ವಜಪತಾಕೆಗಳೊಡಗೂಡಿದ ಉನ್ನತವಾದ ಚಂದ್ರಶಾಲೆಯುಳ್ಳ ಜಿನ ಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ಧವಲಾತ ಪತ್ರ ।
ಚ್ಛಾಯಾ ನಿಮಗ್ನ ತನುಯಕ್ಷ ಕುಮಾರ ವೃಂದ್ಯೈಃ ॥
ದೋಧೂಯ ಮಾನಸಿತ ಚಾಮರ ಪಂಕ್ತಿಭಾಸಂ ।
ಭಾಮಂಡಲದ್ಯುತಿ ಯುತ ಪ್ರತಿಮಾಭಿರಾಮಂ ॥ ೮ ॥

ಅರ್ಥ:—ಶ್ವೇತಚ್ಛತ್ರಿಯ ನೆರಳಿನಿಂದ ವ್ಯಾಪ್ತವಾದ ಶರೀರವುಳ್ಳ ಯಕ್ಷದೇವತೆಗಳು ಬೀಸುತ್ತಿರುವ ಶುಭ್ರವಾದ ಚಾಮರಗಳ ಪಂಕ್ತಿಯ ಕಾಂತಿಯುಳ್ಳುದೂ, ಭಾಮಂಡಲದ ಕಾಂತಿಯಿಂದ ಯುಕ್ತವಾದ ಪ್ರತಿಮೆ ಗಳಿಂದ ಮನೋಹರವೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಜಿನೇಂದ್ರ ಭವನಂ ವಿವಿಧ ಪ್ರಕಾರ ।
ಪುಷ್ಪೋಪಹಾರ ರಮಣೀಯ ಸುರತ್ನ ಭೂಮಿ ॥
ನಿತ್ಯಂ ವಸಂತ ತಿಲಕ ಶ್ರಿಯಮಾದಧಾನಂ
ಸನ್ಮಂಗಲಂ ಸಕಲಚಂದ್ರ ಮುನಿಂದ್ರವಂದ್ಯಂ ॥ ೯ ॥

ಅರ್ಥ:—ನಾನಾವಿಧವಾದ ಪುಷ್ಪಗಳಿಂದ ರಮಣೀಯವಾದ ರತ್ನ ಭೂಮಿಯುಳ್ಳದೂ ಯಾವಾಗಲೂ ವಸಂತಕಾಲದ ತಿಲಕವೃಕ್ಷದ ಶೋಭೆ ಯನ್ನು ಧರಿಸಿರುವುದೂ, ಉತ್ತಮವಾದ ಮಂಗಲಸ್ವರೂಪವೂ, ಸಮಸ್ತ ಚಂದ್ರರಿಂದಲೂ ಮುನೀಂದ್ರರಿಂದಲೂ ವಂದಿಸುವುದಕ್ಕೆ ಯೋಗ್ಯವೂ ಆದ ಜಿನಮಂದಿರವನ್ನು ನೋಡಿದೆನು.

ದೃಷ್ಟಂ ಮಯಾದ್ಯ ಮಣಿಕಾಂಚನ ಚಿತ್ರತುಂಗೆ |
ಸಿಂಹಾಸನಾದಿ ಜಿನಬಿಂಬ ವಿಭೂತಿ ಯುಕ್ತಂ ||
ಚೈತಾಲಯಂ ಯದತುಲಂ ಪರಕೀರ್ತಿತಂ ಮೇ |
ಸನ್ಮಂಗಲಂ ಸಕಲಚಂದ್ರ ಮುನೀಂದ್ರವಂದ್ಯಂ || ೧೦ ||

ಅರ್ಥ:—ಸಮಸ್ತಚಂದ್ರರಿಂದಲೂ ಮುನೀಶ್ವರರಿಂದಲೂ ವಂದಿಸು ವುದಕ್ಕೆ ಯೋಗ್ಯವೂ ಮಂಗಲಸ್ವರೂಪವೂ ಆದ ಯಾವ ಚೈತ್ಯಾಲಯವು ಉಪಮಾರಹಿತವಾದುದೆಂದು ನನಗೆ ಅನ್ಯರು ಹೇಳಿದ್ದರೋ ಅಂತಹ ರತ್ನ ಬಂಗಾರಗಳಿಂದ ನಾನಾವರ್ಣವೂ ಉನ್ನತವೂ ಆದ ಸಿಂಹಾಸನ ಮೊದ ಲಾದ ಜಿನಬಿಂಬಸಂಪತ್ತಿನಿಂದ ಕೂಡಿರುವ ಚೈತ್ಯಾಲಯವನ್ನು ಈಗ ನಾನು ನೋಡಿದೆನು.

## || ಅದ್ಯಾಷ್ಟಕ ಸ್ತೋತ್ರಂ ||

ಅದ್ಯಮೇ ಸಫಲಂ ಜನ್ಮನೇತ್ರೇಚ ಸಫಲೇಮಮ ||
ತ್ವಾಮದ್ರಾಕ್ಷಂ ಯತೋದೇವ ಹೇತುಮಕ್ಷಯಸಂಪದಃ || ೧ ||

ಸ್ವಾಮಿಯೇ ! ನಾಶರಹಿತವಾದ ಸಂಪತ್ತಿಗೆ ಕಾರಣನಾದ ನಿನ್ನನ್ನು ನೋಡಿದುದರಿಂದ ಈಗ ನನ್ನ ಜನ್ಮವು ಸಫಲವಾದುದು. ನನ್ನ ಕಣ್ಣು ಗಳೂ ಸಫಲವಾದುವು.

ಅದ್ಯಸಂಸಾರ ಗಂಭೀರ ಪಾರಾವಾರಃಸುದುಸ್ತರಃ ||
ಸುತರೋಯಂ ಕ್ಷಣೇನೈವ ಜಿನೇಂದ್ರ ತವದರ್ಶನಾತ್ || ೨ ||

ಜಿನೇಶ್ವರನೆ ! ದಾಟುವುದಕ್ಕೆ ಅತ್ಯಂತ ಕಠಿಣವಾದ ಈ ಸಂಸಾರ ವೆಂಬ ಆಳವಾದ ಸಮುದ್ರವು ನಿನ್ನ ದರ್ಶನದಿಂದ ಈಗ ಒಂದು ಕ್ಷಣಕಾಲ ದಿಂದಲೇ ಸುಖವಾಗಿ ದಾಟುವುದಕ್ಕೆ ಯೋಗ್ಯವಾದುದು.

ಅದ್ಯಮೇಕ್ಷಾಲಿತಂ ಗಾತ್ರಂ ನೇತ್ರೇಚ ವಿಮಲೇಕೃತೇ ॥
ಸ್ನಾತೋಽಹಂ ಧರ್ಮತೀರ್ಥೇಷು ಜಿನೇಂದ್ರ ತವದರ್ಶನಾತ್ ।೩।

ಜಿನೇಶ್ವರನೆ! ನಿನ್ನ ದರ್ಶನದಿಂದ ಈಗ ನನ್ನ ಶರೀರವು ತೊಳೆಯು ಲ್ಪಟ್ಟಿತು. ಕಣ್ಣುಗಳು ನಿರ್ಮಲವಾಗಿ ಮಾಡಲ್ಪಟ್ಟವು. ನಾನು ಧರ್ಮ ವೆಂಬ ತೀರ್ಥಗಳಲ್ಲಿ ಸ್ನಾನಮಾಡಿದೆನು.

ಅದ್ಯಮೇ ಸಫಲಂ ಜನ್ಮಪ್ರಶಸ್ತಂ ಸರ್ವಮಂಗಲಂ ॥
ಸಂಸಾರಾರ್ಣವತಿರ್ಣೋಽಹಂ ಜಿನೇಂದ್ರ ತವದರ್ಶನಾತ್ ॥ ೪ ॥

ಜಿನೇಶ್ವರನೆ! ನಿನ್ನ ದರ್ಶನದಿಂದ ಈಗ ನನ್ನ ಜನ್ಮವು ಸಫಲವಾ ದುದು. ಶ್ರೇಷ್ಠವಾದ ಸಮಸ್ತ ಮಂಗಲವೂ ಉಂಟಾದುದು. ನಾನು ಸಂಸಾ ರವೆಂಬ ಸಮುದ್ರವನ್ನು ದಾಟುವವನಾದೆನು.

ಅದ್ಯ ಕರ್ಮಾಷ್ಟಕಜ್ವಾಲಂ ವಿಧೂತಂಸಕಷಾಯಕಂ ।
ದುರ್ಗತೇರ್ವಿನಿವೃತ್ತೋಽಹಂ ಜಿನೇಂದ್ರ ತವದರ್ಶನಾತ್ ।೫।

ಜಿನೇಶ್ವರನೆ ! ನಿನ್ನ ದರ್ಶನದಿಂದ ಕ್ರೋಧ ಮೊದಲಾದ ಕಷಾಯ ಸಹಿತವಾದ ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹ ನೀಯ, ಆಯುಷ್ಯ, ನಾಮ , ಗೋತ್ರ, ಅಂತರಾಯ ಈ ಎಂಟು ಕರ್ಮ ಗಳೆಂಬ ಜ್ವಾಲೆಯು ಈಗ ನಾಶವಾದುದು. ನಾನು ನರಕಾದಿ ದುರ್ಗತಿ ಯಿಂದ ಹಿಂತಿರುಗಿದೆನು.

ಅದ್ಯ ಸೌಮ್ಯಾ ಗ್ರಹಾಃಸರ್ವೇ ಶುಭಾಶ್ಚೈಕಾದಶಸ್ಥಿತಾಃ ।
ನಷ್ಟಾನಿ ವಿಘ್ನಜಾಲಾನಿ ಜಿನೇಂದ್ರ ತವದರ್ಶನಾತ್ ॥ ೬ ॥

ಜಿನೇಶ್ವರನೆ! ನಿನ್ನ ದರ್ಶನದಿಂದ ಗ್ರಹಗಳೆಲ್ಲ ಸೌಮ್ಯಗಳಾಗಿ ಶುಭವಾದ ಏಕಾದಶಸ್ಥಾನದಲ್ಲಿ ನೆಲೆಯಾದವು. ವಿಘ್ನಸಮೂಹಗಳೆಲ್ಲ ನಾಶವಾದುವು.

ಅದ್ಯ ನಷ್ಟೋ ಮಹಾಬಂಧಃ ಕರ್ಮಣಾಂ ದುಃಖದಾಯಕಃ |
ಸುಖಸಂಗಂ ಸಮಾಪನ್ನೋ ಜಿನೇಂದ್ರ ತವದರ್ಶನಾತ್ || ೭ ||

ಜಿನೇಶ್ವರನೆ ! ದುಃಖವನ್ನು ಕೊಡುವ ಕರ್ಮಗಳ ಮಹಾಬಂಧನವು ಈಗ ನಿನ್ನ ದರ್ಶನದಿಂದ ನಷ್ಟವಾಗಿ ನಾನು ಸುಖಿಯಾದೆನು.

ಅದ್ಯಕರ್ಮಾಷ್ಟಕಂ ನಷ್ಟಂ ದುಃಖೋತ್ಪಾದನ ಕಾರಕಂ ||
ಸುಖಾಂಭೋಧಿನಿಮಗ್ನೋಽಹಂ ಜಿನೇಂದ್ರತವದಶನಾತ್ | ೮|

ಜಿನೇಶ್ವರನೆ ! ದುಃಖೋತ್ಪತ್ತಿಗೆ ಕಾರಣವಾದ ಎಂಟು ಕರ್ಮಗಳು ಈಗ ನಿನ್ನ ದರ್ಶನದಿಂದ ನಷ್ಟವಾದುವು. ನಾನು ಸುಖವೆಂಬ ಸಮುದ್ರ ದಲ್ಲಿ ಮುಳುಗಿದೆನು.

ಅದ್ಯಮಿಥ್ಯಾಂಧಕಾರಸ್ಯ ಹಂತಾ ಜ್ಞಾನದಿವಾಕರಃ ||
ಉದಿತೋಮಚ್ಛರೀರೇಽಸ್ಮಿನ್ ಜಿನೇಂದ್ರತವದರ್ಶನಾತ್ || ೯ ||

ಜಿನೇಶ್ವರನೆ ! ಈಗ ನಿನ್ನ ದರ್ಶನದಿಂದ ಮಿಥ್ಯಾತ್ವವೆಂಬ ಅಂಧಕಾರವನ್ನು ನಾಶಮಾಡುವ ಜ್ಞಾನವೆಂಬ ಸೂರ್ಯನು ಈ ನನ್ನ ಶರೀರದಲ್ಲಿ ಉದಯಿಸಿದನು.

ಅದ್ಯಾಹಂ ಸುಕೃತೀ ಭೂತೋ ನಿರ್ಧೂತಾಶೇಷಕಲ್ಮಷಃ |
ಭುವನತ್ರಯಪೂಜ್ಯೋಽಹಂಜಿನೇಂದ್ರತವದರ್ಶನಾತ್ || ೧೦ ||

ಸ್ವಾಮಿಯೇ ! ಈಗ ನಿನ್ನ ದರ್ಶನದಿಂದ ನಾನು ಪುಣ್ಯಶಾಲಿಯೂ, ಸಮಸ್ತ ಪಾಪಗಳನ್ನು ನಾಶಮಾಡಿದವನೂ ಮೂರುಲೋಕಕ್ಕೆ ಪೂಜ್ಯನೂ ಆದೆನು.

ಅದ್ಯಾಷ್ಟಕಂ ಪಠೇದ್ಯಸ್ತು ಗುಣಾನಂದಿತ ಮಾನಸಃ ||
ತಸ್ಯಸರ್ವಾರ್ಥ ಸಂಸಿದ್ಧಿರ್ಜಿನೇಂದ್ರ ತವದರ್ಶನಾತ್ || ೧೧ ||

ಜಿನೇಶ್ವರನೆ ! ನಿನ್ನ ದರ್ಶನದಿಂದ ನಿನ್ನ ಗುಣಗಳನ್ನು ತಿಳಿದು ಆನಂದವಾದ ಮನಸ್ಸುಳ್ಳವನಾಗಿ ಯಾವನು ಈ ಅದ್ಯಾಷ್ಟಕವನ್ನು ಪಠಿಸುವನೋ ಅವನಿಗೆ ಸಮಸ್ತ ಇಷ್ಟಾರ್ಥಗಳ ಸಿದ್ಧಿಯಾಗುವುದು.

## ॥ ಸುಪ್ರಭಾತ ಸ್ತೋತ್ರಂ ॥

ಯತ್ಸ್ವರ್ಗಾವತರೋತ್ಸವೇ ಯದಭವಜ್ಜನ್ಮಾಭಿಷೇಕೋತ್ಸವೇ ॥ ಯದ್ದೀಕ್ಷಾಗ್ರಹಣೋತ್ಸವೆ ಯದಖಿಲಜ್ಞಾನ ಪ್ರಕಾಶೋತ್ಸವೇ ॥ ಯನ್ನಿರ್ವಾಣಗಮೋತ್ಸವೇ ಜಿನಪತೇಃ ಪೂಜಾದ್ಭುತಂ ತದ್ಭವೈಃ ॥ ಸಂಗೀತಸುತಿ ಮಂಗಲೈಃಪ್ರಸರ ತಾಂ ಮೇ ಸುಪ್ರಭಾತೋತ್ಸವಃ ॥ ೧ ॥

ಜಿನೇಶ್ವರರು ಸ್ವರ್ಗದಿಂದ ಗರ್ಭಕ್ಕೆ ಅವತರಿಸುವ ಉತ್ಸವದಲ್ಲಿಯೂ ಜನ್ಮಾಭಿಷೇಕೋತ್ಸವದಲ್ಲಿಯೂ ದೀಕ್ಷಾಗ್ರಹಣೋತ್ಸವದಲ್ಲಿಯೂ, ಕೇವಲ ಜ್ಞಾನಪ್ರಾದುರ್ಭಾವೋತ್ಸವದಲ್ಲಿಯೂ, ನಿರ್ವಾಣಪ್ರಾಪ್ತಿ ಉತ್ಸವದಲ್ಲಿಯೂ ಜಿನೇಶ್ವರರ ಯಾವ ಪೂಜಾ ಅತಿಶಯವುಂಟಾಗಿದ್ದಿತೋ ಅದರಿಂದುಂಟಾದ ಸಂಗೀತ ಸ್ತೋತ್ರ ಮಂಗಲಗಾನ ಇವುಗಳಿಂದ ನನಗೆ ಶ್ರೇಷ್ಠವಾದ ಪ್ರಭಾತಕಾಲ ಉತ್ಸವವುಂಟಾಗಲಿ.

ಶ್ರೀಮನ್ನತಾಮರ ಕಿರೀಟಮಣಿ ಪ್ರಬಾಭಿ ।  
ರಾಲೀಢಪಾದ ಯುಗ ದುರ್ಧರ ಕರ್ಮದೂರ ॥  
ಶ್ರೀನಾಭಿನಂದನ ಜಿನಾಜಿತಶಂಭವಾಖ್ಯ ।  
ತ್ವದ್ಧ್ಯಾನತೋಽಸ್ತು ಸತತಂ ಮಮಸುಪ್ರಭಾತಂ ॥ ೨ ॥

ಐಶ್ವರ್ಯಸಂಪನ್ನರೂ ನಮಸ್ಕರಿಸಿದವರೂ ಆದ ದೇವತೆಗಳ ಕಿರೀಟಗಳಲ್ಲಿರುವ ರತ್ನಗಳ ಪ್ರಭೆಗಳಿಂದ ವ್ಯಾಪ್ತವಾದ ಪಾದಯುಗವುಳ್ಳವರೂ ಧರಿಸುವದಕ್ಕೆ ಕಠಿಣವಾದ ಕರ್ಮಗಳಿಂದ ದೂರವಾಗಿರುವವರೂ ಆದ ಶ್ರೀನಾಭಿರಾಜರ ಪುತ್ರರೇ ! ಅಜಿತತೀರ್ಥಕರರೇ ಶಂಭವ ತೀರ್ಥಂಕರರೇ ! ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ. ಪ್ರಭಾತ ಕಾಲದಲ್ಲಿ ದೇವರ ಧ್ಯಾನವುಂಟಾಗಲೆಂದು ಭಾವವು—

ಛತ್ರತ್ರಯ ಪ್ರಚಲ ಚಾಮರ ವೀಜ್ಯಮಾನ ।  
ದೇವಾಭಿನಂದನಮುನೇ ಸುಮತೇ ಜಿನೇಂದ್ರ ॥

ಪದ್ಮ ಪ್ರಭಾರುಣ ಮಣಿದ್ಯುತಿ ಭಾಸುರಾಂಗೆ
ತ್ವದ್ಧ್ಯಾನತೋಽಸ್ತು ಸತತಂ ಮಮ ಸುಪ್ರಭಾತಂ ||

ಮೂರು ಛತ್ರವುಳ್ಳವರೂ ಚಲಿಸುತ್ತಿರುವ ಚಾಮರಗಳಿಂದ ಬೀಸಲ್ಪಡುವವರೂ ಆದ ಅಭಿನಂದನ ತೀರ್ಥಂಕರರೇ! ಸುಮತಿ ಜಿನೇಶ್ವರರೇ! ಪದ್ಮರಾಗ ರತ್ನದಕಾಂತಿಯಂತೆ ಪ್ರಕಾಶಮಾನವಾದ ಶರೀರವುಳ್ಳ ಪದ್ಮಪ್ರಭ ತೀರ್ಥಂಕರರೇ! ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ

ಅರ್ಹನ್ಸುಪಾರ್ಶ್ವಕದಲೀ ದಲವರ್ಣಗಾತ್ರ |
ಪ್ರಾಲೇಯತಾರ ಗಿರಿ ಮೌಕ್ತಿಕ ವರ್ಣಗೌರ ||
ಚಂದ್ರಪ್ರಭ ಸ್ಫಟಿಕ ಪಾಂಡರ ಪುಷ್ಪದಂತ |
ತ್ವದ್ಧ್ಯಾನತೋಽಸ್ತು ಸತತಂ ಮಮ ಸುಪ್ರಭಾತಂ || ೪ ||

ಬಾಳೆ ಎಲೆಯ ವರ್ಣದಂತೆ ಬಣ್ಣವುಳ್ಳ ಶರೀರವುಳ್ಳವರೂ ಪೂಜ್ಯರೂ ಆದ ಸುಪಾರ್ಶ್ವ ತೀರ್ಥಂಕರರೇ! ಹಿಮ, ನಕ್ಷತ್ರ, ರಜತಾದ್ರಿ ಮುತ್ತು ಇವುಗಳ ವರ್ಣದಂತೆ ಶುಭ್ರವಾದ ಚಂದ್ರಪ್ರಭ ಸ್ವಾಮಿಯೇ! ಸ್ಫಟಿಕದಂತೆ ಬೆಳ್ಳಗಿರುವ ಪುಷ್ಪದಂತ ಸ್ವಾಮಿಯೇ! ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ—

ಸಂತಪ್ತ ಕಾಂಚನರುಚೇಜಿನ ಶೀತಲಾಖ್ಯ |
ಶ್ರೇಯಾನ್ ವಿನಷ್ಟ ದುರಿತಾಷ್ಟಕಲಂಕಪಂಕ ||
ಬಂಧೂಕ ಬಂಧುರ ರುಚೇಜಿನವಾಸುಪೂಜ್ಯ |
ತ್ವದ್ಧ್ಯಾನತೋಽಸ್ತು ಸತತಂ ಮಮಸುಪ್ರಭಾತಂ || ೬ ||

ಚನ್ನಾಗಿ ಪುಟಕ್ಕಿಟ್ಟ ಬಂಗಾರದ ಕಾಂತಿಯಂತೆ ಕಾಂತಿಯುಳ್ಳ ಶೀತಲ ಜಿನೇಶ್ವರರೇ! ಎಂಟು ಕರ್ಮಗಳೆಂಬ ಕೆಸರನ್ನು ನಾಶಮಾಡಿದ ಶ್ರೇಯಾಂಶ ತೀರ್ಥಂಕರರೇ! ಬಂಧೂಗೆ ಗಿಡದಂತೆ ಮನೋಹರವಾದ ಕಾಂತಿಯುಳ್ಳ! ವಾಸುಪೂಜ್ಯ ಜಿನೇಶ್ವರರೇ ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ.

ಉದ್ದಂಡ ದರ್ಪಕರಿಪ್ರೋ ವಿಮಲಾಮಲಾಂಗ |
ಸ್ಥೇ ಮನ್ನನಂತ ಜಿದನಂತ ಸುಖಾಂಬು ರಾಶೇ ||
ದುಷ್ಕರ್ಮ ಕಲ್ಮಷ ವಿವರ್ಜಿತ ಧರ್ಮನಾಥ |
ತ್ವಧ್ಯಾನತ್ತೊಸ್ತು ಸತತಂ ಮಮ ಸುಪ್ರಭಾತಂ || ೬ ||

ಗರ್ವಿಷ್ಟನಾದ ಮನ್ಮಥನಿಗೆ ಶತ್ರುವೂ ನಿರ್ಮಲವಾದ ಶರೀರವುಳ್ಳವರೂ ಆದ ವಿಮಲ ತೀರ್ಥಂಕರರೇ! ಧೀರರೂ ಅಂನತ ಸುಖವೆಂಬ ಸಮುದ್ರವುಳ್ಳವರೂ ಆದ ಅನಂತ ತೀರ್ಥಂಕರರೇ! ದುಷ್ಟಕರ್ಮಗಳೆಂಬ ಕಲ್ಮಷವಿಲ್ಲದಿರುವ ಧರ್ಮ ತೀರ್ಥಂಕರರೆ! ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ.

ದೇವಾಮರೀಕುಸುಮ ಸನ್ನಿಭ ಶಾಂತಿನಾಥ |
ಕುಂಥೋದಯಾ ಗುಣ ವಿಭೂಷಣ ಭೂಷಿತಾಂಗ ||
ದೇವಾಧಿ ದೇವ ಭಗವನ್ನರ ತೀರ್ಥನಾಥ |
ತ್ವಧ್ಯಾನತೋಸ್ತು ಸತತಂ ಮಮ ಸುಪ್ರಭಾತಂ || ೭ ||

ದೇವಸ್ತ್ರೀಯರಿಗೆ ಪ್ರೀತಿಯಾದ ಕಲ್ಪವೃಕ್ಷದ ಪುಷ್ಪಕ್ಕೆ ಸಮಾನರಾದ ಶಾಂತಿ ತೀರ್ಥೇಶ್ವರರೇ ! ದಯಾಗುಣವೆಂಬ ವಿಭೂಷಣದಿಂದ ಅಲಂಕೃತವಾದ ಶರೀರವುಳ್ಳ ಕುಂಥು ತೀರ್ಥೇಶ್ವರರೇ! ದೇವತೆಗಳಿಗೆಲ್ಲ ಸ್ವಾಮಿಯಾದ ಭಗವನ್ ಅರ ತೀರ್ಥಂಕರರೇ! ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಪ್ರಭಾತವಾಗಲಿ

ಯನ್ಮೋಹಮಲ್ಲ ಮದಭಂಜನ| ಮಲ್ಲಿನಾಥ ಕ್ಷೇಮಂಕರಾವಿತಥ
ಶಾಸನಸುವ್ರತಾಖ್ಯ || ಸತ್ಸಂಪದಾ ಪ್ರಶಮಿತೋನೆಮಿ ನಾಮ
ಧೇಯ ತ್ವದ್ಧ್ಯಾನತೊಸ್ತು ಸತತಂ ಮಮಸುಪ್ರಭಾತಂ || ೮ ||

ಅರ್ಥ—ಮೋಹವೆಂಬ ಜಟ್ಟಿಯ ಅಹಂಕಾರವನ್ನು ನಾಶಮಾಡಿದ ಮಲ್ಲಿನಾಥ ಸ್ವಾಮಿಯೇ ಕ್ಷೇಮವನ್ನು ಮಾಡುವವರೂ ಯಥಾರ್ಥವಾದ ಉಪದೇಶವುಳ್ಳವರೂ ಆದ ಮುನಿಸುವ್ರತ ಸ್ವಾಮಿಯೇ ಶ್ರೇಷ್ಟವಾದ ಸಂಪತ್ತಿನಿಂದು ಪಶುಮ ಭಾವವನ್ನು ಹೊಂದಿದ ನಮಿತೀರ್ಥಂಕರರೇ ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದಾ ಸುಪ್ರಭಾತವಾಗಲಿ.

ತಾಪಿಚ್ಛಗುಚ್ಛರುಚಿರೋಜ್ಜ್ವಲ ನೇಮಿನಾಥ ಘೋರೋಪಸರ್ಗ
ವಿಜಯಿನ್ ಜಿನ ಪಾರಿಶ್ವರ್ನಾಥ | ಸ್ಯಾದ್ವಾದಸೂಕ್ತಿ ಮಣಿ
ದರ್ಪಣ ವರ್ಧಮಾನ ತ್ವದ್ಧ್ಯಾನತೋಽಸ್ತು ಸತತಂ ಮಮಸುಪ್ರ
ಭಾತಂ ॥ ೯ ॥

ಅರ್ಥ— ಹೊಂಗೆಮರದ ಪುಷ್ಪದ ಗೊಂಚಲಿನಂತೆ ಮನೋಹರರೂ ಪ್ರಕಾಶಮಾನರೂ ಆದ ನೇಮೀಶ್ವರಸ್ವಾಮಿಯೇ ಘೋರವಾದ ಉಪಸ ರ್ಗವನ್ನು ಜಯಿಸಿದ ಪಾರ್ಶ್ವನಾಥ ಜಿನೇಶ್ವರರೇ ಸ್ಯಾದ್ವಾದ ವಚನಕ್ಕೆ ರತ್ನಗನ್ನಡಿಯಂತಿರುವ ವರ್ಧಮಾನ ಸ್ವಾಮಿಯೇ ನಿಮ್ಮ ಧ್ಯಾನದಿಂದಾ ಸುಪ್ರಭಾತವಾಗಲಿ.

ಪ್ರಾಲೇಯ ನೀಲಹರಿತಾ ರುಣಪೀತಭಾಸಂ | ಯನ್ಮೂರ್ತಿ
ಮವ್ಯಯ ಸುಖಾವಸಥಂ ಮುನೀಂದ್ರಾಃ ॥ ಧ್ಯಾಯಂತಿ ಸಪ್ತ
ತ್ರಿಶತಂ ಜಿನವಲ್ಲಭಾನಾಂ | ತ್ವದ್ಧ್ಯಾನತೋಽಸ್ತು ಸತತಂ ಮಮ
ಸುಪ್ರಭಾತ್ ೧೦ ॥

ಅರ್ಥ—ನೂರೆಪ್ಪತ್ತು ಕರ್ಮ ಭೂಮಿಗಳಲ್ಲಿರಬಹುದಾದ ತೀರ್ಥಂಕರರ ಹಿಮ ನೀಲಿ ಹಸರು ಕೆಂಪು ಹಳದಿ ಈ ಕಾಂತಿಗಳುಳ್ಳವು ಸುಖಕ್ಕೆ ಸ್ಥಾನಗಳು ಆದ ಯಾವ ಮೂರ್ತಿಗಳನ್ನು ಮುನೀಶ್ವರರು ಧ್ಯಾನಿಸುತ್ತಾರೋ ಅಂಥಹ ನೂರೆಪ್ಪತ್ತು ಜಿನೇಶ್ವರರೇ ಯಾವಾಗಲೂ ನನಗೆ ನಿಮ್ಮ ಧ್ಯಾನದಿಂದ ಸುಪ್ರಭಾತವಾಗಲಿ.

ಸುಪ್ರಭಾತಂ ಸುನಕ್ಷತ್ರ ಮಾಂಗಲ್ಯ ಪರಿಕೀರ್ತಿತಂ |
ಚತುರ್ವಿಂಶತಿ ತೀರ್ಥಾನಾಂ ಸುಪ್ರಭಾತಂದಿನೇ ದಿನೇ ॥ ೧೧ ॥

ಅರ್ಥ—ಪ್ರತಿದಿನದಲ್ಲಿಯೂ ಶ್ರೇಷ್ಠವಾದ ಪ್ರಭಾತವೂ ಒಳ್ಳೆಯ ನಕ್ಷತ್ರವೂ ಇಪ್ಪತ್ತು ನಾಲ್ಕು ತೀರ್ಥಂಕರರ ಸಂಬಂಧವಾದ ಸುಪ್ರಭಾತವು ಮಂಗಲಕರವಾದುದೆಂದು. ಹೇಳಲ್ಪಟ್ಟಿದೆ.

ಸುಪ್ರಭಾತಂ ಸುನಕ್ಷತ್ರಂ ಶ್ರೇಯಃಪ್ರತ್ಯಭಿನಂದಿತಂ |
ದೇವತಾ ಋಷಯಃ ಸಿದ್ಧಾಃ ಸುಪ್ರಭಾತಂ ದಿನೇದಿನೇ ॥೧೨॥

ಅರ್ಥ—ಪ್ರತಿದಿನದಲ್ಲಿಯೂ ಸುಪ್ರಭಾತವೂ ಒಳ್ಳೇಯ ನಕ್ಷತ್ರವೂ ಮಂಗಲಕರವಾದುವೆಂದು ಸವ್ಮತಿಸಲ್ಪಟ್ಟಿದೆ ದೇವತೆಗಳು ಋಷಿಗಳು ಸಿದ್ಧಪರಮೇಷ್ಠಿಗಳು ಸುಪ್ರಭಾತರು ಪ್ರಭಾತಕಾಲದಲ್ಲಿ ದೇವತಾದಿಗಳನ್ನು ಸ್ಮರಿಸುವದು ಮಂಗಲಕರವಾದದ್ದೆಂದು ಭಾವವು

ಸುಪ್ರಭಾತಂ ತವೈಕಸ್ಯ ವೃಷಭಸ್ಯ ಮಹಾತ್ಮನಃ ||
ಯೆನಪ್ರರ್ತಿತಂ ತೀರ್ಥಂ ಭವ್ಯ ಸತ್ವಸುಖಾವಹಂ || ೧೩ ||

ಅರ್ಥ— ಭವ್ಯಪ್ರಾಣಿಗಳಿಗೆ ಸುಖವನ್ನುಂಟು ಮಾಡುವ ಧರ್ಮೋಪದೇಶವು ಯಾರಿಂದ ಮಾಡಲ್ಪಟ್ಟಿತೋ ಅಂಥಾ ಪ್ರಖ್ಯರೂ ಮಹಾತ್ಮರೂ ಆದ ವೃಷಭ ಸ್ವಾಮಿಯ ಸುಪ್ರಭಾತವಾಗಲಿ ಪ್ರಾತಃಕಾಲದಲ್ಲಿ ಸ್ಮರಣೆಯುಂಟಾಗಲೆಂದು ಭಾವವು.

ಸುಪ್ರಭಾತಂ ಜಿನೇಂದ್ರಾಣಾಂ ಜ್ಞಾನೋನ್ಮಿಲಿತಚಕ್ಷುಷಾಮ್ |
ಅಜ್ಞಾನ ತಿಮಿರಾಂಧಾನಾಂ ನಿತ್ಯಮಸ್ತಮಿತೊರವಿಃ || ೧೪ ||

ಅರ್ಥ— ಜ್ಞಾನವೆಂಬ ಕಣ್ಣನ್ನು ತೆರೆದಿರುವ ಜಿನೇಶ್ವರರ ಸುಪ್ರಭಾತವಾಗಲಿ ಅಜ್ಞಾನವೆಂಬ ಕತ್ತಲೆಯಿಂದ ಕುರುಡರಾದವರಿಗೆ ಜಿನಸೂರ್ಯನು ಯಾವಾಗಲೂ ಅಸ್ತಂಗತನಾಗಿರುತ್ತಾನೆ.

ಸುಪ್ರಭಾತಂ ಜಿನೇಂದ್ರಸ್ಯವೀರಃ ಕಮಲಲೋಚನಃ |
ಯೇನ ಕರ್ಮಾಟವಿದಗ್ಧಾ ಶುಕ್ಲಧ್ಯಾನೋಗ್ರವಹ್ನಿನಾ || ೧೫ ||

ಅರ್ಥ—ಜಿನೇಶ್ವರರ ಸುಪ್ರಭಾತವಾಗಲಿ ಶುಕ್ಲಧ್ಯಾನವೆಂಬ ಬಯಂಕರವಾದ ಬೆಂಕಿಯಿಂದಾ ಕರ್ಮವೆಂಬ ಕಾಡನ್ನು ಸುಟ್ಟಿರುವ ವರ್ಧಮಾನ ಸ್ವಾಮಿಯು ಕಮಲದಂತೆ ನೇತ್ರವುಳ್ಳವರೂ ಹೀಗೆ ಪ್ರಾತಃಕಾಲದಲ್ಲಿ ಸ್ಮರಣೆಯುಂಟಾಗಬೆಕೆಂದರ್ಥವು.

ಸುಪ್ರಭಾತಂ ಸುನಕ್ಷತ್ರಂ ಸುಕಲ್ಯಾಣಂ ಸುಮಂಗಲಂ |
ತ್ರೈಲೋಕ್ಯಹಿತ್ಯ ಕರ್ತೃಣಾಂ | ಜಿನಾನಾಮೇವ ಶಾಸನಂ |೧೬|

ಅರ್ಥ— ಮೂರು ಲೋಕಕ್ಕೋಹಿತವನ್ನು ಮಾಡುವ ಜಿನೇಶ್ವರರ ಉಪದೇಶವೇ ಸುಪ್ರಭಾತವು ಶ್ರೇಷ್ಠ ನಕ್ಷತ್ರವೂ ಉತ್ತಮ ಕಲ್ಯಾಣವೂ ಮಂಗಳವು ಆಗಿದೆ.

# ಶ್ರೀ ಭಾಗಚಂದ್ರವಿರಚಿತ ಶ್ರೀ ಮಹಾವೀರಸ್ತವನ

ಯದೀಯೇ ಚೈತನ್ಯೇ ಮುಕುರ ಇವ ಭಾವಾಶ್ಚಿದಚಿತಃ । ಸಮಂ ಭಾಂತಿ ಧ್ರೌವ್ಯವ್ಯಯಜನಿಲಸಂತೋಂತರಹಿತಾಃ ॥ ಜಗತ್ಸಾಕ್ಷೀಮಾರ್ಗ ಪ್ರಕಟನಪರೋ ಭಾನುರಿವ ಯೋ । ಮಹಾವೀರಸ್ವಾಮಿ ನಯನಪಥ ಗಾಮಿ ಭವತು ನಃ ॥ ೧ ॥ ಅತಾಂಮ್ರಂ ಯಚ್ಚಕ್ಷುಃಕಮಲಯುಗಲಂ ಸ್ಪಂದರಹಿತಂ । ಜನಾಂಕೋಪಾಪಾಯಂ ಪ್ರಕಟಯತಿ ವಾಭ್ಯಂತರ ಮಪಿ ॥ ಸ್ಫುಟಂ ಮೂರ್ತಿರ್ಯಸ್ಯ ಪ್ರಶಮತಮಯಾ ವಾತಿವಿಮಲಾ । ಮಹಾವೀರಸ್ವಾಮೀ ನಯನಪಥಗಾಮೀ ಭವತು ನಃ ॥ ೨ ॥ ನಮನ್ನಾ ಕೇಂದ್ರಾಲೀಮುಕುಟಮಣಿಭಾಜಾಲಜಟಿಲಂ । ಲಸದ್ಪಾದಾಂಭೋಜ ದ್ವಯಮಿಹ ಯದೀಯ ತನುಭೃತಾಂ ॥ ಭವ ಜ್ವಾಲಾಶಾಂತ್ಯೈ

---

ತಾತ್ಪರ್ಯಃ—ಯಾವ ವರ್ಧಮಾನಸ್ವಾಮಿಯ ದರ್ಪಣದಂತಿರುವ ಕೇವಲಜ್ಞಾನದಲ್ಲಿ ಉತ್ಪತ್ತಿ, ವಿನಾಶ, ಮತ್ತು ಧ್ರೌವ್ಯ ( ಸ್ಥಿರವಾಗಿರುವಿಕೆ ) ಇವುಗಳಿಂದ ಕೂಡಿರುವುವೂ ನಾಶವಿಲ್ಲದುವೂ ಜೀವಾಜೀವರೂಪವೂ ಆದ ದ್ರವ್ಯಗಳು ಸಂಪೂರ್ಣವಾಗಿ ಪ್ರಕಾಶಿಸುತ್ತವೆಯೋ, ಅಂತಹ ಸೂರ್ಯನು ಎಲ್ಲ ವಸ್ತುಗಳನ್ನು ಪ್ರಕಾಶಗೊಳಿಸುವಂತೆ, ಜಿನಧರ್ಮದ ಪ್ರಭಾವನೆ ಯನ್ನು ಮಾಡುವುದರಲ್ಲಿ ಸಮರ್ಥನೂ ಆದ ಯಾವ ವರ್ಧಮಾನ ಸ್ವಾಮಿಯು ನಮಗೆ ದೃಷ್ಟಿಪಥಕ್ಕೆ ಗೋಚರಿಸಲಿ ( ದರ್ಶನವನ್ನು ಕೊಡಲಿ ಎಂದು ಭಾವವು ) ॥ ೧ ॥ ತಾಮ್ರವರ್ಣವಿಲ್ಲದುದೂ ಚಲನೆ ಇಲ್ಲ ದುದೂ ಜನರ ಅಂತರಂಗದಲ್ಲಿ ಶಾಂತಪರಿಣಾಮವನ್ನುಂಟುಮಾಡುವದೂ ಆದ ಕಮಲದಂತಿರುವ ಕಂಣ್ಣುಗಳುಳ್ಳವನೂ, ಸುಂದರವೂ ಶಾಂತಸ್ವರೂ ಪವೂ ಅತಿನಿರ್ಮಲವೂ ಆದ ಶರೀರವುಳ್ಳವನೂ ಆದ ವರ್ಧಮಾನಸ್ವಾಮಿಯು ನಮಗೆ ದರ್ಶನವನ್ನುಂಟು ಮಾಡಲಿ. ॥ ೨ ॥ ಇಲ್ಲಿ ಯಾವ ಸ್ವಾಮಿಯ ನಮಸ್ಕರಿಸುತ್ತಿರುವ ದೇವೇಂದ್ರರ ಸಮೂಹದ ಕಿರೀಟಗಳಲ್ಲಿರುವ ರತ್ನಗಳ ಪ್ರಭೆಯ ಸಮೂಹದಿಂದ ವ್ಯಾಪ್ತವೂ ಶೋಭಾಯಮಾನವೂ ಆದ ಪಾದ ಕಮಲಗಳೆರಡನ್ನು ಸ್ಮರಿಸಿದರೆ, ನೀರಿನಿಂದ ಸಂತಾಪವು ದೂರವಾಗುವಂತೆ,

ಪ್ರಭವತಿ ಜಲಂ ವಾ ಸ್ಮೃತಮಪಿ। ಮಹಾವೀರಸ್ವಾಮೀ ನಯನ
ಪಥಗಾಮೀ ಭವತು ನಃ ॥೩॥ ಯದರ್ಚಾಭಾವೇನ ಪ್ರಮುದಿ
ತಮನಾ ದರ್ದುರ ಇಹ। ಕ್ಷಣಾದಾಸೀತ್ಸ್ವರ್ಗೀಗುಣಗಣಸಮೃದ್ಧಃಸುಖ
ನಿಧಿಃ॥ ಲಭಂತೇ ಸದ್ಭಕ್ತಾಃ ಶಿವಸುಖಸಮಾಜಂ ಕಿಮು ತದಾ। ಮಹಾ
ವೀರಸ್ವಾಮೀ ನಯನಪಥಗಾಮೀ ಭವತು ನಃ ॥೪॥ ಕನತ್ಸ್ವರ್ಣಾ
ಭಾಸೋಪ್ಯಪಗತತನುರ್ಜ್ಞಾನನಿವಹೋ। ವಿಚಿತ್ರಾತ್ಮಾಪ್ಯೇಕೋ ನೃಪತಿ
ವರಸಿದ್ಧಾರ್ಥತನಯಃ॥ ಅಜನ್ಮಾಪಿ ಶ್ರೀಮಾನ್ವಿಗತಭವರಾಗೋದ್ಭುತಗತಿಃ॥
ಮಹಾವೀರಸ್ವಾಮೀ ನಯನಪಥಗಾಮೀ ಭವತು ನಃ ॥೫॥ ಯದೀಯಾ
ವಾಗ್ಗಂಗಾ ವಿವಿಧನಯಕಲ್ಲೋಲವಿಮಲಾ। ಬೃಹಜ್ಜ್ಞಾನಾಂಭೋಭಿರ್ಜ
ಗತಿ ಜನತಾಂ ಯಾ ಸ್ನಪಯತಿ॥ ಇದಾನೀಮಪ್ಯೇಷಾ ಬುಧಜನಮರಾಲೈಃ

---

ಪ್ರಾಣಿಗಳಿಗೆ ಈ ಸಂಸಾರದಲ್ಲುಂಟಾಗುವ ಸಂತಾಪವು ತೊಲಗುವುದು.
ಅಂತಹ ವರ್ಧಮಾನಸ್ವಾಮಿಯು ನಮಗೆ ದರ್ಶನವನ್ನುಂಟುಮಾಡಲಿ.
॥೩॥ ಯಾವ ಭಗವಂತನನ್ನು ಪೂಜಿಸಬೇಕೆಂಬ ಸತ್ಪರಿಣಾಮದಿಂದ
ಸಂತೋಷವನ್ನು ಹೊಂದಿದ ಮನಸುಳ್ಳ ಕಪ್ಪೆಯು ಕ್ಷಣಕಾಲದಲ್ಲಿ
ಅಷ್ಟಗುಣಗಳಿಂದ ಯುಕ್ತನೂ ಹೆಚ್ಚಾದ ಸುಖಗಳಿಗೊಡೆಯನೂ ಆದ
ದೇವನಾಗಿ ಆಯಿತೋ, ಹೀಗಿರುವಾಗ ಭವ್ಯರು ಮುಕ್ತಿಯನ್ನು ಹೊಂದು
ವುದೇನಾಶ್ಚರ್ಯ! ಅಂತಹ ವರ್ಧಮಾನಸ್ವಾಮಿಯು ನನಗೆ ದರ್ಶನವ
ನ್ನುಂಟುಮಾಡಲಿ. ॥೪॥ ಪ್ರಕಾಶಮಾನವಾದ ಬಂಗಾರದಂತೆ ಕಾಂತಿಯುಳ್ಳ
ಪರಮೌದಾರಿಕ ಶರೀರವುಳ್ಳವರಾದಾಗ್ಯೂ ಸಪ್ತಧಾತುಮಯವಾದ ಶರೀರ
ವಿಲ್ಲದಿರುವರೂ ನಾನಾ ವಿಧವಾದ ಆತ್ಮರುಳ್ಳವರಾಗಿದ್ದರೂ ಜ್ಞಾನಗುಣ
ದಿಂದ ಸಮಾನರೂ ಜನನ(ಮರಣ) ರಹಿತರಾದವರಾದರೂ ಶ್ರೇಷ್ಠನಾದ
ಸಿದ್ಧಾರ್ಥರಾಜನಪುತ್ರರೂ ಸಂಪದ್ಯುಕ್ತರೂ ವೀತರಾಗರೂ ಆಶ್ಚರ್ಯಕಾರಿ
ಯಾದ (ಆಕಾಶ) ಗಮನವುಳ್ಳವರೂ ಆದ ವರ್ಧಮಾನಸ್ವಾಮಿಯು ನಮಗೆ
ದರ್ಶನವನ್ನು ಕೊಡಲಿ ॥೫॥ ಯಾವ ಸ್ವಾಮಿಯ ವಚನವೆಂಬ ಗಂಗಾನ
ದಿಯು ನಾನಾವಿಧವಾದ ನಯಗಳೆಂಬ ನಿರ್ಮಲವಾದ ತೆರೆಗಳುಳ್ಳದೂ ಜನಸ
ಮೂಹವನ್ನು ತನ್ನ ಹೆಚ್ಚಾದ ಜ್ಞಾನವೆಂಬ ಜಲಗಳಿಂದ ತೃಪ್ತಿಪಡಿಸುವುದೂ

ಪರಿಚಿತಾ । ಮಹಾವೀರಸ್ವಾಮೀ ನಯನಪಥಗಾಮೀ ಭವತು ನಃ ॥ ೬ ॥ ಅನಿರ್ವಾರೋದ್ರೇಕಸ್ತ್ರಿಭುವನಜಯೀಕಾಮಸುಭಟಃ । ಕುಮಾರಾವಸ್ಥಾಯಾಮಪಿ ನಿಜಬಲಾದ್ಯೇನ ವಿಜಿತಃ ॥ ಸ್ಫುರನ್ನಿತ್ಯಾನಂದಪ್ರಶಮಪದ ರಾಜ್ಯಾಯ ಸ ಜಿನಃ । ಮಹಾವೀರಸ್ವಾಮೀ ನಯನಪಥಗಾಮೀ ಭವತು ನಃ ॥ ೭ ॥ ಮಹಾಮೋಹಾತಂಕಪ್ರಶಮನಪರಾಕಸ್ಮಿಕಭಿಷಕ್ । ನಿರಾಪೇಕ್ಷೋ ಬಂಧುರ್ವಿದಿತಮಹಿಮಾ ಮಂಗಲಕರಃ ॥ ಶರಣ್ಯಃ ಸಾಧೂನಾಂ ಭವಭಯಭೃತಾಮುತ್ತಮಗುಣೋ । ಮಹಾವೀರಸ್ವಾಮೀ ನಯನಪಥಗಾಮೀ ಭವತು ನಃ ॥ ೮ ॥ ಮಹಾವೀರಾಷ್ಟಕಂ ಸ್ತೋತ್ರಂ । ಭಕ್ತ್ಯಾ ಭಾಗೇಂದುನಾ ಕೃತಂ । ಯಃ ಪಠೇಚ್ಛೃಣುಯಾಚ್ಚಾಪಿ । ಸ ಯಾತಿ ಪರಮಾಂ ಗತಿಂ ॥ ೯ ॥

---

ಈಗಲೂ ಸತ್ಪುರುಷರೆಂಬ ಹಂಸಪಕ್ಷಿಗಳಿಂದ ಯುಕ್ತವೂ ಆಗಿದೆಯೋ? ಅಂತಹ ಮಹಾವೀರಸ್ವಾಮಿಯು ನಮಗೆ ದರ್ಶನವನ್ನು ಕೊಡಲಿ. ॥ ೬ ॥ ತಡೆಯಲಶಕ್ಯವಾದ ಉದಯವುಳ್ಳವನೂ ಮೂರು ಲೋಕವನ್ನು ಜಯಿಸಿದವನೂ ಆದ ಮನ್ಮಥನೆಂಬ ಮಹಾಭಟವನ್ನು ಬ್ಯಾವಲ್ಲಿಯೇ ತನ್ನ ಪರಾಕ್ರಮದಿಂದ ಜಯಿಸಿದವರೂ, ಪ್ರಕಾಶಮಾನವೂ ನಿತ್ಯಾನಂದಮಯವೂ ಶಾಂತಸ್ವರೂಪವೂ ಆದ ಮೋಕ್ಷವೆಂಬ ರಾಜ್ಯವನ್ನು ಪಡೆದವರೂ ಆದ ಆ ವರ್ಧಮಾನ ಸ್ವಾಮಿಯು ನಮಗೆ ದರ್ಶನವನ್ನು ಕೊಡಲಿ. ॥ ೭ ॥ ಹೆಚ್ಚಾದ ಮೋಹವೆಂಬ ರೋಗವನ್ನು ನಿವಾರಿಸುವುದಕ್ಕೆ ಶ್ರೇಷ್ಠನೂ ಆಕಸ್ಮಾತ್ತಾಗಿ ಪ್ರಾಪ್ತನೂ ಆದ ವೈದ್ಯನಂತಿರುವವರೂ ಅಕಾರಣಬಂಧುವೂ, ಪ್ರಕಟವಾದ ಮಹಿಮೆಯುಳ್ಳವರೂ ಮಂಗಲಮಯರೂ ಸಂಸಾರಭೀರುಗಳಾದ ಭವ್ಯರನ್ನು ರಕ್ಷಿಸುವವರೂ ಉತ್ತಮವಾದ ಗುಣಗಳುಳ್ಳವರೂ ಆದ ಮಹಾವೀರಸ್ವಾಮಿಯು ನಮಗೆದರ್ಶನವನ್ನು ಕೊಡಲಿ. ॥ ೮ ॥ ಭಾಗಚಂದ್ರನೆಂಬ ಕವಿಯಿಂದ ರಚಿಸಲ್ಪಟ್ಟ ಈ ಮಹಾವೀರಾಷ್ಟಕಸ್ತೋತ್ರವನ್ನು ಭಕ್ತಿಯಿಂದ ಓದುವವರೂ ಕೇಳುವವರೂ ಪರಮಗತಿಯನ್ನು ಹೊಂದುತ್ತಾರೆ. ॥ ೯ ॥

---

# ಸರಸ್ವತೀಸ್ತೋತ್ರಂ

ಚಂದ್ರಾರ್ಕಕೋಟಿಘಟಿತೋಜ್ಜ್ವಲದಿವ್ಯಮೂರ್ತೇ। ಶ್ರೀಚಂದ್ರಿಕಾಕಲಿತನಿರ್ಮಲಶುಭ್ರವಾಸೇ॥ ಕಾಮಾರ್ಥದೇ! ಚ ಕಲಹಂಸಸಮಾಧಿರೂಢೇ ವಾಗೀಶ್ವರಿ! ಪ್ರತಿದಿನಂ ಮಮ ರಕ್ಷ ದೇವಿ ! ॥ ೧ ॥ ದೇವಾಸುರೇಂದ್ರನತಮೌಲಿಮಣಿಪ್ರರೋಚಿ । ಶ್ರೀಮಂಜರೀನಿಬಿಡರಂಜಿತಪಾದಪದ್ಮೇ ॥ ನೀಲಾಳಕೇ ಪ್ರಮದಹಸ್ತಿಸಮಾನಯಾನೇ ವಾಗೀಶ್ವರಿ ! ಪ್ರತಿದಿನಂ ಮಮ ರಕ್ಷ ದೇವಿ ! ॥ ೨ ॥ ಕೇಯೂರಹಾರಮಣಿಕುಂಡಲಮುದ್ರಿಕಾದ್ಯೈ । ಸರ್ವಾಂಗಭೂಷಣನರೇಂದ್ರಮುನೀಂದ್ರವಂದ್ಯೇ ॥ ನಾನಾಸುರತ್ನವರನಿರ್ಮಲಮೌಲಿಯುಕ್ತೇ । ವಾಗೀಶ್ವರಿ ! ಪ್ರತಿದಿನಂ ಮಮ ರಕ್ಷದೇವಿ ! ॥ ೩ ॥ ಪೂಜ್ಯೇ ಪವಿತ್ರಕರಣೋನ್ನತಕಾಮರೂಪೇ ನಿತ್ಯಂ ಫಣೀಂದ್ರಗರುಢಾಧಿಪ

---

ತಾತ್ಪರ್ಯ:—ಅನೇಕ ಸೂರ್ಯಚಂದ್ರರಂತಿರುವ ಉಜ್ವಲವೂ ದಿವ್ಯವೂ ಆದ ಮೂರ್ತಿಯುಳ್ಳವಳೂ, ಶೋಭಾಯುಕ್ತವಾದ ಬೆಳದಿಂಗಳಿನಂತಿರುವುದೂ ನಿರ್ಮಲವೂ ಶುಭ್ರವೂ ಆದ ವಸ್ತ್ರವುಳ್ಳವಳೂ, ಇಷ್ಟಾರ್ಥವನ್ನು ಕೊಡುವವಳೂ, ಹಂಸವಾಹನಳೂ ಆದ ಎಲೈ ಸರಸ್ವತಿದೇವಿಯೇ ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು. ॥ ೧ ॥ ದೇವೇಂದ್ರ ಅಸುರೇಂದ್ರ ಇವರುಗಳಿಂದ ನಮಸ್ಕರಿಸಲ್ಪಟ್ಟ ಕಿರೀಟದ ರತ್ನಗಳ ಕಿರಣಗಳೆಂಬ ಸಂಪತ್ತಿನ ರಾಶಿಯಿಂದ ವ್ಯಾಪ್ತವೂ ಮನೋಹರವೂ ಆದ ಪಾದಕಮಲವುಳ್ಳವಳೂ, ನೀಲ (ಕಪ್ಪು)ವಾದ ಕೂದಲುಳ್ಳವಳೂ ಮದಗಜಗಮನೆಯೂ ಆದ ಸರಸ್ವತಿದೇವಿಯೇ ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು ॥೨॥ ಭುಜಕೀರ್ತಿಹಾರರತ್ನಕುಂಡಲಮುದ್ರಿಕೆ ಮೊದಲಾದುವುಗಳಿಂದ ಸರ್ವಾಂಗಭೂಷಣರಾದ ರಾಜರಿಂದಲೂ, ಮುನೀಂದ್ರರಿಂದ ವಂದಿತಳೂ, ಅನೇಕವಿಧವಾದ ಒಳ್ಳೇ ರತ್ನಗಳಿಂದ ಶ್ರೇಷ್ಠವೂ ನಿರ್ಮಲವೂ ಆದ ಕಿರೀಟದಿಂದ ಕೂಡಿರುವವಳೂ ಆದ ಸರಸ್ವತಿದೇವಿಯೇ ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು. ॥ ೩ ॥ ಪವಿತ್ರವನ್ನು ಉಂಟುಮಾಡುವುದೂ, ಶ್ರೇಷ್ಠವೂ ಆದ ಇಚ್ಛಿತರೂಪವುಳ್ಳವಳೂ, ನಿತ್ಯವೂ ಧರಣೇಂದ್ರ ಗರುಢಾಧಿಪ ಕಿನ್ನರೇಂದ್ರ ಇವರುಗಳಿಂದಲೂ ವಿದ್ಯಾಧರೇಂದ್ರ

ಕಿನ್ನರೇಂದ್ರೈಃ || ವಿದ್ಯಾಧರೇಂದ್ರಸುರಯಕ್ಷಸಮಸ್ತವೃಂದೈಃ | ವಾಗೀಶ್ವರಿ! ಪ್ರತಿದಿನಂ ಮಮ ರಕ್ಷ ದೇವಿ! || ೪ || ಕಂಕೇಳಿಪಲ್ಲವವಿನಿಂದಿತಪಾಣಿಯುಗ್ಮೇ | ಪದ್ಮಾಸನೇ ದಿವಸಪದ್ಮಸಮಾನವಕ್ತ್ರೇ || ಜೈನೇಂದ್ರವಕ್ತ್ರಭವದಿವ್ಯಸಮಸ್ತಭಾಷೇ | ವಾಗೀಶ್ವರಿ ! ಪ್ರತಿದಿನಂ ಮಮ ರಕ್ಷ ದೇವಿ! ||೫|| ಮಂಜೀರಕೋತ್ಕನಕಕಂಕಣಕಿಂಕಿಣೀನಾಂ| ಕಾಂಚ್ಯಾಶ್ಚ ಝಂಕೃತರವೇಣ ವಿರಾಜಮಾನೇ || ಸದ್ಧರ್ಮವಾರಿನಿಧಿಸಂತತವರ್ಧಮಾನೇ ವಾಗೀಶ್ವರಿ ! ಪ್ರತಿದಿನಂ ಮಮ ರಕ್ಷ ದೇವಿ ! || ೬ || ಅರ್ಧೇಂದುಮಂಡಿತಜಟಾಲಲಿತಸ್ವರೂಪೇ ಶಾಸ್ತ್ರಪ್ರಕಾಶಿನಿ! ಸಮಸ್ತಕಲಾಧಿನಾಥೇ|| ಚಿನ್ಮುದ್ರಿಕಾಜಪಸರಾಭಯಪುಸ್ತಕಾಂಕೇ | ವಾಗೀಶ್ವರಿ ! ಪ್ರತಿದಿನಂ ಮಮ ರಕ್ಷ ದೇವಿ ! || ೭ || ಡಿಂಡೀರಪಿಂಡಹಿಮಶಂಖಸಿತಾಭ್ರಹಾರೇ| ಪೂರ್ಣೇಂದುಬಿಂಬರುಚಿಶೋಭಿತ

---

ರಿಂದಲೂ ದೇವತೆಗಳು ಯಕ್ಷರು ಇವರುಗಳ ಸಮೂಹದಿಂದಲೂ ಪೂಜ್ಯಳೂ ಆದ ಸರಸ್ವತಿದೇವಿಯೇ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು. ||೪|| ಅಶೋಕ ವೃಕ್ಷದ ತಳಿರನ್ನು ತಿರಸ್ಕರಿಸುವಂತಿರುವ ಕೈಗಳೆರಡುಳ್ಳವಳೂ, ಪದ್ಮಾಸನೆಯೂ, ಚೆನ್ನಾಗಿ ಅರಳಿದ ತಾವರೆಯಂತಿರುವ ಮುಖವುಳ್ಳವಳೂ, ಜಿನೇಶ್ವರನ ಮುಖದಿಂದ ಉದ್ಭವಿಸಿದುದೂ ದಿವ್ಯವೂ ಆದ ಸಮಸ್ತಭಾಷಾಮಯಳೂ ಆದ ಸರಸ್ವತಿದೇವಿಯೆ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು. ||೫|| ಕಡಗ ಶ್ರೇಷ್ಠವಾದ ಬಂಗಾರದ ಕೈಬಳೆ ಗೆಜ್ಜೆ ಇವುಗಳ ಮತ್ತು ಡಾಬಿನ ಝೇಂಕಾರದಿಂದ ಶೋಭಿಸುವವಳೂ, ಜಿನಧರ್ಮವೆಂಬ ಸಮುದ್ರವನ್ನು ಯಾವಾಗಲೂ ವೃದ್ಧಿಪಡಿಸುವವಳೂ ಆದ ಸರಸ್ವತಿದೇವಿಯೇ ! ಸದಾ ನನ್ನನ್ನು ರಕ್ಷಿಸು. || ೬ || ಅರ್ಧಚಂದ್ರನಿಂದ ಅಲಂಕೃತವಾದ ಜಡೆಯಿಂದ ಮನೋಜ್ಞವಾದ ರೂಪವುಳ್ಳವಳೂ, ಶಾಸ್ತ್ರಪ್ರಕಾಶಕಳೂ ಸಮಸ್ತ ಕಲೆ (ವಿದ್ಯೆ) ಗೆ ಒಡೆಯಳೂ, ಜ್ಞಾನಮುದ್ರೆ ಜಪಮಾಲೆ ಅಭಯದಾನ ಪುಸ್ತಕ ಇವುಗಳಿಂದ ಯುಕ್ತಳೂ ಆದ ಸರಸ್ವತಿದೇವಿಯೇ! ನನ್ನನ್ನು ಪ್ರತಿದಿನವೂ ರಕ್ಷಿಸು. || ೭ || ನೊರೆಯಪುಂಜ ಹಿಮ ಶಂಖ ಬಿಳುಪಾದ ಮೇಘ ಇವುಗಳಂತಿರುವ ಹಾರವುಳ್ಳವಳೂ, ಪೂರ್ಣಚಂದ್ರನ ಮಂಡಲದಂತೆ ಕಾಂತಿಯುಕ್ತವೂ ಪ್ರಕಾಶಮಾನವೂ ದಿವ್ಯವೂ ಆದ ಶರೀರವುಳ್ಳವಳೂ, ಚಂಚಲವಾದ

ದಿವ್ಯಗಾತ್ರೀ|| ಚಾಂಚಲ್ಯಮಾನಮೃಗಶಾಬಲಲಾಟನೇತ್ರೀ ವಾಗೀಶ್ವರಿ! ಪ್ರತಿದಿನಂ ಮಮ ರಕ್ಷ ದೇವಿ | ||೮|| ಸರಸ್ವತ್ಯಾಃ ಪ್ರಸಾದೇನ ! ಕಾವ್ಯಂ ಕುರ್ವಂತು ಮಾನವಾಃ - ತಸ್ಮಾನ್ನಿಶ್ಚಲಭಾವೇನ | ಪೂಜನೀಯಾ ಸರಸ್ವತೀ || ೯ || ಸರಸ್ವತೀ ಮಯಾ ದೃಷ್ಟಾ | ದಿವ್ಯಾ ಕಮಲಲೋಚನಾ || ಹಂಸಸ್ಕಂಧಸಮಾರೂಢಾ | ವೀಣಾಪುಸ್ತಕಧಾರಿಣೀ || ೧೦ || ಪ್ರಥಮಂ ಭಾರತೀನಾಮ ದ್ವಿತೀಯಂ ಚ ಸರಸ್ವತೀ || ತೃತೀಯಂ ಶಾರದಾದೇವೀ | ಚತುರ್ಥಂ ಹಂಸಗಾಮಿನೀ || ೧೧ || ಪಂಚಮಂ ವಿದುಷಾಂ ಮಾತಾ | ಷಷ್ಠಂ ವಾಗೀಶ್ವರೀ ತಥಾ || ಕುಮಾರೀ ಸಪ್ತಮಂ ಪ್ರೋಕ್ತಾ | ಅಷ್ಟಮಂ ಬ್ರಹ್ಮಚಾರಿಣೀ || ೧೨ || ನವಮಂಚ ಜಗನ್ಮಾತಾ | ದಶಮಂ ಬ್ರಾಹ್ಮಿಣೀ ತಥಾ || ಏಕಾದಶಂ ತು ಬ್ರಹ್ಮಾಣೀ | ದ್ವಾದಶಂ ವರದಾ ಭವೇತ್ ||೧೩|| ವಾಣೀತ್ರಯೋದಶಂ ನಾಮಾ | ಭಾಷಾಚೈವ ಚತುರ್ದಶಂ || ಪಂಚದಶಂ

---

ಜಿಂಕೆಯ ಮರಿಯಂತಿರುವುದೂ ಹಣೆಯಲ್ಲಿ ಉಳ್ಳುದೂ ಆದ ನೇತ್ರವುಳ್ಳವಳೂ ಆದ ಸರಸ್ವತಿದೇವಿಯೇ! ಪ್ರತಿನಿತ್ಯವೂ ನನ್ನನ್ನು ರಕ್ಷಿಸು. || ೮ || ಮನುಜರು ಸರಸ್ವತಿದೇವಿಯ ಅನುಗ್ರಹದಿಂದ ಕಾವ್ಯ (ಶಾಸ್ತ್ರ) ವನ್ನು ಮಾಡಲಿ. ಆದ್ದರಿಂದ ಏಕಾಗ್ರತೆಯಿಂದ ಸರಸ್ವತಿ (ಜಿನವಾಣಿ) ಯನ್ನು ಪೂಜಿಸಬೇಕು. || ೯ || ದಿವ್ಯಳೂ ಕಮಲದಂತಿರುವ ಕಂಣುಳ್ಳವಳೂ ಹಂಸವಾಹನೆಯೂ ವೀಣೆಪುಸ್ತಕಗಳನ್ನು ಧರಿಸಿದವಳೂ ಆದ ಸರಸ್ವತಿದೇವಿಯನ್ನು ನಾನು ನೋಡಿದೆನು. || ೧೦ || ಮೊದಲು 'ಭಾರತಿ' ಎಂಬ ಹೆಸರೂ ಎರಡನೇ ಹೆಸರು 'ಸರಸ್ವತಿ' ಎಂದೂ ಮೂರನೇ 'ಶಾರದಾದೇವಿ' ಎಂದೂ ನಾಲ್ಕನೇ 'ಹಂಸಗಾಮಿನಿ' ಎಂದೂ ಐದನೇ 'ವಿದ್ವಾಂಸರ ತಾಯಿ' ಎಂದೂ ಆರನೇ 'ವಾಗೀಶ್ವರೀ' ಎಂದೂ ಏಳನೇ 'ಕುಮಾರೀ' ಎಂದೂ ಎಂಟನೇ 'ಬ್ರಹ್ಮಚಾರಿಣೀ' ಎಂದೂ ಒಂಬತ್ತನೇ 'ಜಗನ್ಮಾತಾ' ಎಂದೂ ಹಾಗೆಯೇ ಹತ್ತನೇ 'ಬ್ರಾಹ್ಮಿಣೀ' ಹನ್ನೊಂದನೇ 'ಬ್ರಹ್ಮಾಣೀ' ಎಂದೂ ಹನ್ನೆರಡನೇ ವರದಾ' ಎಂಬದಾಗಿಯೂ ಆಗುವುದು. || ೧೩ || ಹದಿಮೂರನೇ ಹೆಸರು 'ವಾಣಿ' ಎಂದೂ ಹದಿನಾಲ್ಕನೇ 'ಭಾಷಾ' ಎಂದೂ ಹದಿನೈದನೇ 'ಶ್ರುತದೇವಿ' ಎಂದೂ ಈ ರೀತಿಯಾಗಿ ಷೋಡಶಾಂಗವೆಂದು ಹೇಳಲ್ಪಟ್ಟಿದೆ.

ಶ್ರುತದೇವೀ । ಷೋಡಶಾಂಗಂ ನಿಗದ್ಯತೇ ॥ ೧೪ ॥ ಏತಾನಿ ಶ್ರುತನಾಮಾನಿ।
ಪ್ರಾತರುತ್ಥಾಯ ಯಃ ಪಠೇತ್ ॥ ತಸ್ಯ ಸಂತುಷ್ಯತಿ ಮಾತಾ । ಶಾರದಾ
ವರದಾ ಭವೇತ್ ॥ ೧೫ ॥ ಸರಸ್ವತಿ ! ನಮಸ್ತುಭ್ಯಂ । ವರದೇ ಕಾಮ
ರೂಪಿಣಿ ॥ ವಿದ್ಯಾರಂಭಂ ಕರಿಷ್ಯಾಮಿ । ಸಿದ್ಧಿರ್ಭವತು ಮೇ ಸದಾ ।೧೬।

---

॥೧೪॥ ಈ ಸರಸ್ವತಿದೇವಿಯ ನಾಮಗಳನ್ನು ಯಾವನು ಬೆಳಿಗ್ಗೆ ಎದ್ದು
ಪಠನಮಾಡುನೋ ಅವನಿಗೆ ಶಾರದಾದೇವಿಯು ಪ್ರಸನ್ನಳಾಗಿಯೂ ವರ
ವನ್ನು ಕೊಡುವವಳಾಗಿಯೂ ಆಗುತ್ತಾಳೆ. ॥೧೫॥ ವರವನ್ನು ಕೊಡು
ವವಳೂ ಕಾಮರೂಪಿಣಿಯೂ ಆದ ಸರಸ್ವತಿದೇವಿಯೇ! ನಿನಗೆ ನಮ
ಸ್ಕಾರವು. ವಿದ್ಯಾರಂಭವನ್ನು ಮಾಡುವೆನು. ನನಗೆ ಯಾವಾಗಲೂ
ವಿದ್ಯಾಸಿದ್ಧಿಯಾಗಲಿ ॥ ೧೬ ॥ ಇತಿ ಸರಸ್ವತಿಸ್ತೋತ್ರಂ ॥

# ಚೈತ್ಯವಂದನೆ

ಸದ್ಭಕ್ತ್ಯಾ ದೇವಲೋಕೇ ರವಿಶಶಿಭುವನೇ ವ್ಯಂತರಾಣಾಂ ನಿಕಾಯೇ ।
ನಕ್ಷತ್ರಾಣಾಂ ನಿವಾಸೇ ಗ್ರಹಗಣಪಟಲೇ ತಾರಕಾಣಾಂ ವಿಮಾನೇ ॥
ಪಾತಾಲೇ ಪನ್ನಗೇಂದ್ರೆ ಸ್ಫುಟಮಣಿಕಿರಣೇ ಧ್ವಸ್ತ ಮಿಥ್ಯಾಂಧಕಾರೇ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರಚೈತ್ಯಾನಿ ವಂದೇ ॥೧॥

ವೈತಾಢ್ಯೇ ಮೇರುಶೃಂಗೇ ರುಚಿಕಗಿರಿವರೇ ಕುಂಡಲೇ ಹಸ್ತಿದಂತೇ ।
ವಕ್ಷಾರೇ ಕೂಟನಂದೀಶ್ವರಕನಕಗಿರೌ ನೈಷಧೇ ನೀಲವಂತೇ ॥
ಚಿತ್ರೇ ಶೈಲೇ ವಿಚಿತ್ರೆ ಯಮಕಗಿರಿವರೇ ಚಕ್ರವಾಕೇ ಹಿಮಾದ್ರೌ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೨॥

ಶ್ರೀಶೈಲೇ ವಿಂಧ್ಯಶೃಂಗೇ ವಿಮಲಗಿರಿವರೇ ಹ್ಯರ್ಬುದೇ ಪಾವಕೇ ವಾ ।
ಸಮ್ಮೇದೇ ತಾರಕೇ ವಾ ಕುಲಗಿರಿಶಿಖರೇಽಷ್ಟಾಪದೇ ಸ್ವರ್ಣಶೈಲೇ ॥
ಸಹ್ಯಾದ್ರೌ ವೈಜಯಂತೆ ವಿಪುಲಗಿರಿವರೇ ಗುರ್ಜರೇ ರೋಹಣಾದ್ರೌ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೩॥

ಆಷಾಢೇ ಮೇದಪಾಟೇ ಕ್ಷಿತಿತಟಮುಕುಟೇ ಚಿತ್ರಕೂಟೇ ಚಲಾಟೇ ।
ನಾಟೇ ಧಾಟೇ ಚ ವಾಟೇ ವಿಘಸವರತಟೇ ದೇವಕೂಟೇ ವಿರಾಟೇ ॥
ಕರ್ನಾಟೇ ಹೇಮಕೂಟೇ ವಿಕಟತರಕಟೇ ಚಕ್ರಕೋಟೇ ಚ ಭೋಟೇ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೪॥

ಶ್ರೀಮಾಲೇ ಮಾಲವೇ ವಾ ಸುಲಯತಿನಿಖಿಲೇ ಮೇಖಲೇ ಪೀಠಲೇ ವಾ ।
ನೇಪಾಲೇ ನಾಹಲೇ ವಾ ಕುವಲಯತಿಲಕೇ ಸಿಂಹಲೇ ಮುಖಲೇ ವಾ ॥
ಡಾಹಾಲೇ ಕೌಶಲೇ ವಾ ವಿಗಲಿತಸಲಿಲೇ ಜಂಗಲೇ ಮಾಲವೇ ವಾ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೫॥

ಅಂಗೇ ವಂಗೇ ಕಲಿಂಗೇ ಸುಗತಜನಪದೇ ಸತ್ಪ್ರಯಾಗೇಽತಿಗಂಗೇ ।
ಗೌಡೇ ಚೌಡೇ ಪುರಂಧ್ರೇ ವರತರದ್ರವಿಡೇ ಉದ್ರಯಾಣೇ ಚ ಮುದ್ರೇ ॥
ಆದ್ರೇ ಮಾಲೇ ಪುಲಿಂದ್ರೇ ದ್ರವಲಕುವಲಯೇ ಕರ್ಣಕುಬ್ಜೇ ಸುರಾಷ್ಟ್ರೇ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೬॥

ಚಂಪಾಯಾಂ ಚಂದ್ರಮುಖ್ಯಾಂ ಗಜಪುರಮಧುರಾಪತ್ತನೇ ಚೋಜ್ಜಯಿ-
ನ್ಯಾಮ್ ।
ಕೌಶಂಬ್ಯಾಂ ಕೌಶಲಾಯಾಂ ಕನಕಪುರವರೇ ದೇವಗಿರ್ಯಾಂ ಚ ಕಾಶ್ಯಾಂ।
ನಾಶಿಕ್ಯೇ ರಾಜಗೇಹೆ ದಶಪುರನಗರೇ ಭದ್ರಿಡೇ ತಾಮ್ರಲಿಪ್ತ್ಯಾಂ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೭॥

ಸ್ವರ್ಗೇ ಮರ್ತ್ಯೇಽಂತರಿಕ್ಷೇ ಗಿರಿಶಿಖರಗೃಹೇ ಸ್ವರ್ನದೀನೀರತೀರೇ ।
ಶೈಲಾಗ್ರೆ ನಾಗಲೋಕೇ ಜಲನಿಧಿಪುಲಿನೇಽಂಭೋರುಹಾಣಾಂ ನಿಕುಂಜೇ ॥
ಗ್ರಾಮೇಽರಣ್ಯೇ ವನೇ ವಾ ಸ್ಥಲಜಲವಿಷಮೇ ದುರ್ಗಮಧ್ಯೇ ತ್ರಿಸಂಧ್ಯೆ ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೮॥

ಇತ್ಥಂ ಶ್ರೀಜೈನಚೈತ್ಯಂ ಸ್ತುತಿಮತಿಮನಸಾಂ ಭಕ್ತಿಭಾಜಾಂ ಪ್ರಸಿದ್ಧಂ ।
ಪ್ರೋದ್ಯೇತ್ಕಲ್ಯಾಣಹೇತುಃಕಲಿಮಲಹರಣಂ ಯೇ ಪಠಂತಿ ತ್ರಿಸಂಧ್ಯಂ ॥
ತೇಷಾಂ ಶ್ರೀತೀರ್ಥಯಾತ್ರಾಫಲಮತುಲಮಲಂ ಜಾಯತೇ ಮಾನವಾನಾಂ।
ಶ್ರೀಮತ್ತೀರ್ಥಂಕರಾಣಾಂ ಪ್ರತಿದಿವಸಮಹಂ ತತ್ರ ಚೈತ್ಯಾನಿ ವಂದೇ ॥೯॥

ಮಾನಸ್ತಂಭಾಃ ಸರಾಂಸಿ ಪ್ರವಿಮಲಜಲಸತ್ಖಾತಿಕಾ ಪುಷ್ಪವಾಟೀ ।
ಪ್ರಾಕಾರೋ ನಾಟ್ಯಶಾಲಾದ್ವಿತಯಮುಪವನಂ ವೇದಿಕಾಂತರ್ಧ್ವಜಾದ್ಯಾಃ
ಶಾಲಃ ಕಲ್ಪದ್ರುಮಾಣಾಂ ಸುಪರಿವೃತವನಂ ಸ್ತೂಪಹರ್ಮ್ಯಾವಲೀ ಚ ।
ಪ್ರಾಕಾರಃಸ್ಫಾಟಿಕಾಂತರ್ನೃಸುರಮುನಿಸಭಾಪೀಠಿಕಾಗ್ರೇ ಸ್ವಯಂಭೂಃ ॥
ವರ್ಷೇಷು ವರ್ಷಾಂತರಪರ್ವತೇಷು ನಂದೀಶ್ವರೇ ಯಾನಿ ಚ ಮಂದರೇಷು॥
ಯಾವಂತಿ ಚೈತ್ಯಾಯತನಾನಿ ಲೋಕೇ ಸರ್ವಾಣಿ ವಂದೇಜಿನಪುಂಗವಾ-
ನಾಮ್ ॥

ಅವನಿತಲಗತಾನಾಂ ಕೃತ್ರಿಮಾಕೃತ್ರಿಮಾಣಾಂ ।
ವನಭವನಗತಾನಾಂ ದಿವ್ಯವೈಮಾನಿಕಾ ನಾಮ್ ।
ಇಹ ಮನುಜಕೃತಾನಾಂ ದೇವರಾಜಾರ್ಚಿತಾನಾಂ ।
ಜಿನವರನಿಲಯಾನಾಂ ಭಾವತೋಽಹಂ ಸ್ಮರಾಮಿ ॥

ಜಂಬೂಧಾತಕಿಪುಷ್ಕರಾರ್ದ್ಧವಸುಧಾ ಕ್ಷೇತ್ರತ್ರಯೇ ಯೆ ಭವಾಃ ॥
ಚಂದ್ರಾಂಭೋಜಶಿಖಂಡಿಕಂಠಕನಕಪ್ರಾವೃಡ್ಘನಾಭಾ ಜಿನಾಂ ॥
ಸಮ್ಯಗ್ಜ್ಞಾನಚಾರಿತ್ರಲಕ್ಷಣಧರಾ ದಗ್ಧಾಷ್ಟಕರ್ಮೇಂಧನಾಃ ।
ಭೂತಾನಾಗತವರ್ತಮಾನಸಮಯೇ ತೇಭ್ಯೋ ಜಿನೇಭ್ಯೋ ನಮಃ ॥
ಶ್ರೀಮನ್ಮೇರೌ ಕುಲಾದ್ರೌ ರಜತ ಗಿರಿವರೇ ಶಾಲ್ಮಲೌ ಜಂಬುವೃಕ್ಷೇ ।
ವಕ್ಷಾರೇ ಚೈತ್ಯವೃಕ್ಷೇ ರತಿಕರರುಚಕೇ ಕುಂಡಲೇ ಮಾನುಷಾಂಕೇ ॥
ಇಷ್ವಾಕಾರೇಂಜನಾದ್ರೌ ದಧಿಮುಖಶಿಖರೇ ವ್ಯಂತರೇ ಸ್ವರ್ಗಲೋಕೇ ।
ಜ್ಯೋತಿರ್ಲೋಕೇಽಭಿವಂದೇ ಭುವನಮಹಿತಲೇ ಯಾನಿ ಚೈತ್ಯಾನಿ ತಾನಿ ॥

ದೇವಾಸುರೇಂದ್ರನರನಾಗಸಮರ್ಚಿತೇಭ್ಯಃ ।
ಪಾಪಪ್ರಣಾಶಕರಭವ್ಯಮನೋಹರೇಭ್ಯಃ ।
ಘಂಟಾಧ್ವಜಾದಿಪರಿವಾರವಿಭೂಷಿತೇಭ್ಯೋ ।
ನಿತ್ಯಂ ನಮೋ ಜಗತಿ ಸರ್ವ ಜಿನಾಲಯೆಭ್ಯಃ ॥

ಇತಿ ಚೈತ್ಯವಂದನಾ ಸಮಾಪ್ತಮ್ ।

---

# ಅಥ ಪಂಚಪರಮೇಷ್ಠಿ ಸ್ತೋತ್ರಮ್.

## ಚಾಮರ ವೃತ್ತಂ

ಶ್ರೀ ಶತೇಂದ್ರ ಯೋಗಿವೃಂದ ವಂದ್ಯವಾದ ಪಂಕಜಂ ।
ಶಾಸ್ವತೇದ್ಧ ಬೋಧದೃಷ್ಟಿ ವೀರಸೌಖ್ಯ ಭಾಸುರಮ್ ॥
ಸುಪ್ರಶಸ್ತಯೋಗದಗ್ಧ ಘಾತಿಕರ್ಮ ವೈರಿಣಂ ।
ಭೂ ಪ್ರಶಸ್ಯನಾಥ ಮರ್ಹದೀಶಮರ್ಚಯಾಮ್ಯಹಮ್ ॥ ೧ ॥

ಅಷ್ಟಕರ್ಮ ವಿಪ್ರಮುಕ್ತ ಮಷ್ಟಸದ್ಗುಣೋಜ್ವಲಂ ।
ದುಷ್ಟಭಾವ ದುಃಖದೂರ ಮಷ್ಟಮೀವ ರಾಗ್ರಜಮ್ ॥
ಸ್ಪಷ್ಟದೃಷ್ಟ ಲೋಕಾಲೋಕ ಮಚ್ಯುತಂ ತುಲೋರ್ಜಿತಂ ।
ತೋಷಯಾಮಿ ನಿಷ್ಠಿತಾರ್ಥ ಮಿದ್ಧ ಸಿದ್ಧ ಸಂಚಯಮ್ ॥ ೨ ॥

ಆಚಾರಂತಿ ಚಾರುಪಂಚ ವೃತ್ತಕಾನಿಯೇ ಸ್ವಯಂ ।
ಚಾರುಯತ್ಯನುಗ್ರಹೋರು ಬುದ್ಧಿತಃ ಸಮಾಶ್ರೀಶಾನ್ ॥
ಶೂರ ಮಾರ ಮಲ್ಲಮಾನ ಮರ್ದಕಾನ್ಗುಣೋಜ್ವಲಾಂ ।
ಸ್ತ್ವಾಂಚ್ಛರಣ್ಯ ಮಂಗಲೋತ್ತ ಮಾನ್ಭಜಾಮಿಶಿಕ್ಷಕಾನ್ ॥ ೩ ॥

ದ್ವಾದಶಾಂಗ ಸಾಂಗಬಾಹ್ಯ ಶಾಸ್ತ್ರವಾರ್ಧಿ ಪಾರಗಾನ್ ।
ಸಾಧುವಾದ ವಜ್ರಬಿನ್ನ ಮತ್ತವಾಗಿ ಭೂಧರಾನ್ ॥
ಸಾದ್ಯ ನಾದ್ಯ ನಂತ ಶಾಂತ ಮೋಕ್ಷಮಾರ್ಗ ದೇಶಕಾ ।
ನಾದರೇಣ ತಾನ್ನಮಾಮಿ ಪಾಠಕಾನ್ಗುಣಾಂ ಬುಧೀನ್ ॥ ೪ ॥

ಮೋಕ್ಷಹೇತು ಭೂತಧರ್ಮ ಶುಕ್ಲಯೋಗ ತತ್ಪರಂ ।
ದಕ್ಷಚಕ್ಷುರಾದಿ ದೃಷ್ಟವಾದಿ ರೋಧನಕ್ಷಮಂ ॥
ಅಕ್ಷಯೋರು ಲಕ್ಷಣೇಯ ಸತ್ಕಟಾಕ್ಷ ವೀಕ್ಷಣಂ ।
ಮೋಕ್ಷ ಮುಖ್ಯ ಸಾಧುಸಂಘ ಮಾಯಜಾಮಿ ಸಿದ್ಧಯೇ ॥ ೫ ॥

॥ ಪಂಚಪರಮೇಷ್ಠಿ ಸ್ತೋತ್ರಂ ಸಮಾಪ್ತಂ ॥

---

# ಪಾರ್ಶ್ವ ಜಿನಸ್ತೋತ್ರ

ಶ್ರೀಪಾರ್ಶ್ವನಾಥ ಜಿನೇಂದ್ರಾ । ನತನಾಗನರೇಂದ್ರಾ ಸುರೇಂದ್ರಾ ॥ಪಲ್ಲ॥ ಮೂರು ಲೋಕದ ತುದಿಯೊಳು ನೀನು । ಮೂರು ಕಾಲದಿ ತಿರುಗಿದೆ ನಾನು ॥ ಮೂರು ರತ್ನವ ಧರಿಸಿದೆ ನೀನು । ಮೂರು ಮರ್ಯಾಪ್ತಿಗೊಳಗಾದೆ ನಾನು ॥ ೧ ॥ ನಾಲ್ಕು ಯೋಗವ ಪೇಳಿದಾತ ನೀನು । ನಾಲ್ಕು ಗತಿಯೋಳು ಬಳಲಿದೆ ನಾನು ॥ ನಾಲ್ಕು ಸಂಗಕೆ ಆಸ್ವಾದೆ ನೀನು । ನಾಲ್ಕು ಕಷಾಯುಕೆ ಅಂಕಿತಾದೆ ನಾನು ॥ ೨ ॥ ಪಂಚಜ್ಞಾನವ ಧರಿಸಿದೆ ನೀನು । ಪಂಚಇಂದ್ರಿಯು ವಶವಾದೆ ನಾನು ॥ ಪಂಚಕಲ್ಯಾಣನಾಯಕ ನೀನು । ಪಂಚಸಂಸಾರದೊಳ್ ಶಿಲ್ಕಿದೆ ನಾನು ॥ ೩ ॥ ಷಡ್ ದ್ರವ್ಯ ದಿಂದ ರಪಿವೆ ನೀನು । ಷಟ್ ಪರ್ಯಾಪ್ತಿಗೊಳಗಾದೆ ನಾನು ॥ ಷಟ್ ಕಾಲವ ಪೇಳಿದಾತ ನೀನು । ಷಟ್ ಕಾಲದಿ ಭ್ರಮೆಯೊಳು ನಾನು ॥ ೪ ॥ ಸಪ್ತ ತತ್ವದಿಂದರಪಿದೆ ನೀನು । ಸಪ್ತ ವ್ಯಸನಾದಿ ಬಳಲಿದೆ ನಾನು ॥ ಸಪ್ತ ಫಣಿಗಳ ಮಂಡಿತ ನೀನು । ಸಪ್ತ ಭಯಭೀತಿಗೊಲಗಾದೆ ನಾನು ॥ ೫ ॥ ಅಷ್ಟ ಕರ್ಮವ ಕೆಡಿಸಿದೆ ನೀನು । ಅಷ್ಟಮದದಿಂದ ಬಹುನೊಂದೆ ನಾನು ॥ ಅಷ್ಟ ಗುಣಗಳ ನಾಯಕ ನೀನು । ಕಷ್ಟಬಟ್ಟಿನು ಬಹುಕಾಲ ನಾನು ॥೬॥ ಯನ್ನ ಕಷ್ಟ ನಿವಾರಿಸೇದಾತಾ । ಚನ್ನಪಟ್ಟಣದ ಪಾರ್ಶ್ವನಾಥಾ ॥ ಹೊನ್ನ ಚಕ್ರ ಪುರೇಶವಿಖ್ಯಾತಾ । ಚನ್ನ ಭುಜಬಲಿರಕ್ಷಿಸು ದಾತಾ ॥ ೭ ॥

---

## ಜಯಮಾಲೆ.

ಪುರುಪರಮೇಶ್ವರ ಸುರನುತ ಜಯ ಜಯ ।
ಪರಮಾನಂದ ಸುಖಾಸ್ಪದ ಜಯ ಜಯ ॥ ೧ ॥
ಅಜಿತ ಜಿನಾಧಿಪ ಅಚಲಿತ ಜಯ ಜಯ ।
ಅಜಿತ ಮನೋಹರ ಭುಜಬಲ ಜಯ ಜಯ ॥ ೨ ॥
ಶಂಭವ ಗಂಭೀರಾಂಬುಧೆ ಜಯ ಜಯ ।
ಚುಂಬಿತ ತನುಕೀರ್ತೀಶ್ವರ ಜಯ ಜಯ ॥ ೩ ॥

ಅಭಿನಂದನ ಜಿನವಲ್ಲಭ ಜಯ ಜಯ |
ಇಭರಿಪುಪೀಠಾಧಿಷ್ಠಿತ ಜಯ ಜಯ ॥ ೪ ॥
ಸುಮತಿ ಜಿನಾಧಿಪ ಸುಲಲಿತ ಜಯ ಜಯ |
ಕುಮತಾಂಬುಧಿವಡವಾನಲ ಜಯ ಜಯ ॥ ೫ ॥
ಪದ್ಮಪ್ರಭ ಪರಮೇಶ್ವರ ಜಯ ಜಯ |
ಪದ್ಮಾಶ್ರಿತಪದಪಂಕಜ ಜಯ ಜಯ ॥ ೬ ॥
ವರಸುಪಾರ್ಶ್ವ ಜಿನಾಧಿಪ ಜಯ ಜಯ ॥
ನಿರುಪಮಗುಣಗಣನಿಲಯ ಜಯ ಜಯ ॥ ೭ ॥
ಚಂದ್ರಪ್ರಭಪರಮೇಶ್ವರ ಜಯ ಜಯ |
ಚಂದ್ರಮುನೀಶ್ವರನುತನತ ಜಯ ಜಯ ॥ ೮ ॥
ಪುಷ್ಪದಂತ ಜಿನಪುಂಗವ ಜಯ ಜಯ |
ಪುಷ್ಪಾಪುಷ್ಪ ಸಮೀರಣ ಜಯ ಜಯ ॥ ೯ ॥
ಶೀತಲಜಿನಪರಮೇಶ್ವರ ಜಯ ಜಯ |
ಭೂತಲಪತಿನುತ ವಂದಿತ ಜಯ ಜಯ ॥ ೧೦ ॥
ಶ್ರೇಯಾಂಸಪರಮೇಶ್ವರ ಜಯ ಜಯ |
ಆಯುತ ಮುಕ್ತಿಶ್ರೀಯುತ ಜಯ ಜಯ ॥ ೧೧ ॥
ವಾಸುಪೂಜ್ಯ ಜಿನವಲ್ಲಭ ಜಯ ಜಯ |
ಭಾಸುರಭವ್ಯನಿವಾಸ ಜಯ ಜಯ ॥ ೧೨ ॥
ವಿಮಲಶ್ರೀರಮಣೀಪತೆ ಜಯ ಜಯ |
ದ್ಯುಮಣೀಸಹಸ್ರದ್ಯುತಿಯುತ ಜಯ ಜಯ ॥ ೧೩ ॥
ಅನಘಾನಂತಜಿನೇಶ್ವರ ಜಯ ಜಯ |
ಘನಕರ್ಮಾಟವಿಪಾಕ ಜಯ ಜಯ ॥ ೧೪ ॥
ಧರ್ಮಜಿನೇಶ್ವರ ನಿರ್ಮಲ ಜಯ ಜಯ |
ಧರ್ಮಾಚಲನಿಭ ನಿಶ್ಚಲ ಜಯ ಜಯ ॥ ೧೫ ॥

ಶಾಂತಿಜಿನೇಶ್ವರ ಶಾಶ್ವತ ಜಯ ಜಯ |
ಸಂತತಬೋಧಾಮೃತಕರ ಜಯ ಜಯ || ೧೬ ||
ಸುಲಲಿತ ಕುಂಥುಜಿನೇಶ್ವರ ಜಯ ಜಯ |
ಜಲಜೇಭನಾಥಸುತಜಿತ ಜಯ ಜಯ || ೧೭ ||
ಅರಜಿನ ಸದ್ವಚೋದ್ಧಾರಕ ಜಯ ಜಯ |
ಪರಮಶ್ರೀಕುಚಕುಂಕುಮ ಜಯ ಜಯ || ೧೮ ||
ಮಲ್ಲಿಜಿನೇಶ್ವರ ವಲ್ಲಭ ಜಯ ಜಯ |
ಸಲ್ಲಲಿತೋನ್ನತ ವಂದಿತ ಜಯ ಜಯ || ೧೯ ||
ಮುನಿಸುವ್ರತಜಿನಕುಂಜರ ಜಯ ಜಯ |
ಮುನಿವೃಂದಾರಕವಂದಿತ ಜಯ ಜಯ | || ೨೦ ||
ನಮಿತಸುರೇಶ್ವರ ನಮಿಜಿನ ಜಯ ಜಯ |
ಕ್ರಮಕಲ್ಯಾಣಸುಪಂಚಕ ಜಯ ಜಯ || ೨೧ ||
ಸುರವಿರಚಿತ ನೇಮೀಶ್ವರ ಜಯ ಜಯ |
ಹರಿವಂಶಾಂಬುಧಿಹಿಮಕರ ಜಯ ಜಯ || ೨೨ ||
ಶ್ರೀಮತ್ಪಾರ್ಶ್ವ ಜಿನಾಧಿಪ ಜಯ ಜಯ |
ಕಾಮಮದೇಭಮದಭಂಜನ ಜಯ ಜಯ || ೨೩ ||
ವರ್ಧಮಾನ ಜಿನನಾಥ ಜಯ ಜಯ |
ಸದ್ಧರ್ಮಪ್ರತಿಪಾಲಕ ಜಯ ಜಯ || ೨೪ ||
ಜಯನಾಥ ಜಯ ಜಿನೇಶ್ವರ
ಜಯ ಜಯ ಕಂದರ್ಪದರ್ಪರಿಪುಕುಲಮಥನ ||
ಜಯನಷ್ಟ ಘಾತಿಕರ್ಮಕ |
ಜಯ ಜಯ ದೇವೇಂದ್ರವೃಂದವಂದಿತಚರಣ || ೨೫ ||

# ಶ್ರೀ ಮಹಾವೀರ ಜಿನ ಅಷ್ಟಕ

[ ಮಲ್ಲಿಕಾಮಾಲೆ ವೃತ್ತದಂತ ]

( ವಿರಚಿತಾಃ—ಅಕ್ಕಾತಾಯಿ, ತೇಜಗೌಡ ಪಾಟೀಲರು )

ಪಾರಮಾರ್ಥದ ಸಾರತತ್ವವ । ಭೂರಿ ಜಗಮೊಳು ಬೀರಿದ ||
ಧೀರ ಶ್ರೀಮಹಾವೀರ ಜಿನಪನ । ಚಾರು ಚರಣವ ಪೂಜಿಪೇಂ ।ಸ್ಥಾಪನಂ।
ಭೂತಳದೊಳಿ ಖ್ಯಾತಿವಡೆದಿಹ । ವ್ರಾತನದಸದಿ ನಿರ್ಮಲ ||
ತೀರ್ಥ ಪರಿಮಳಯುಕ್ತ ಪ್ರಾಸುಕ । ಶೀತಲೋದಕ ಧಾರೆಯಿಂ ||
ಜಾತಿ ಜನ್ಮವ ಮೃತ್ಯು ಹರಿಯಲು । ಪ್ರೀತಿಯಿಂದಲಿ ತ್ರಿಭುವನ-
ನಾಥ ಶ್ರೀಮಹಾವೀರ ಜಿನಪನ । ಪೂತ ಚರಣವ ಪೂಜಿಪೇಂ ||ಜಲಂ।

ಕರ್ಪುರಾದಿ ಸುವಸ್ತುಗಳ, ವರ- । ಸಿರ್ಪ-ಕೇಶರ, ಸಕಲ ದಿ- ||
ಕ್ಕೋಪದಿಕ್ಕಿಗೆ ದಿವ್ಯಪರಿಮಳ । ಪೋಪ ಚಂದನ ಗಂಧದಿಂ ||
ಪಾಪ ಲೇಪವ ತೊಳೆದು ಸಂಸೃತಿ- । ತಾಪ ಲೋಪವಗೈಯಲು ||
ಭೂಪ ಶ್ರೀಮಹಾವೀರ ಜಿನಪನ । ಶ್ರೀಪದಾಬ್ಜವ ಪೂಜಿಪೇಂ || ಗಂಧ ।

ಸಣ್ಣ ಮುತ್ತಿನ ಮಣಿಗಳೋ ನವ- । ರತ್ನ ಮಣಿಗಳ ಪುಂಜವೋ ||
ಎನ್ನುವಂದದ ಅಕ್ಷತೆಯ ಹೊಸ- । ಹೊನ್ನ ತಟ್ಟೆಯೊಳಿಟ್ಟು ನಾಂ ||
ಮಾನ್ಯ ಮುಕ್ತಿಯ ಪಡೆಯಲು, ಭವ- । ಬನ್ನವನು ಪರಿಹರಿಸಲು ||
ಧನ್ಯ ಶ್ರೀಮಹಾವೀರ ಜಿನಪನ । ಚೆನ್ನ ಚರಣವ ಪೂಜಿಪೇಂ ||ಅಕ್ಷತಂ||

ಕ್ರೂರ ಭಾಣವ ಬಿಟ್ಟು ಶೀಘ್ರದಿ । ಮೂರು ಲೋಕದ ಚಿತ್ತವ ||
ಚಾರಿಸುವ ದುರ್ಮಾರಶರನ ವಿ- । ದೂರಗೈಯಲು ಬೇಗದಿಂ ||
ಪಾರಿಜಾತ ಸುಕೇತಕೇ ವರ । ವಾರಿಜಾದಿಯ ಸುಮಗಳಿಂ ||
ಮಾರ ಮರ್ದನ ವೀರ ಜಿನಪನ । ನೀರಜಾಂಘ್ರಿಯ ಪೂಜಿಪೇಂ ||ಪುಷ್ಪಂ||

ನಿರುತ ಬಾಧೆಯ ನೀಡುತಿಹ ಅತಿ । ದುರಿತ ವ್ಯಾಧಿಕ್ಷುದಾ ತೃಷಾ ||
ತ್ವರಿತದಿಂ ಪರಿಹರಿಯಲೋಸುಗ । ಸುರುಚಿರಾಮಲ ಭಕ್ತಿಯಿಂ ||
ಸುರಸ ಕಂಪಿನ ಭಕ್ಷ ಬಹುವಿಧ । ಚರುವಿನಿಂ ನೆರೆ ಹರುಷದಿಂ ||
ಕರುಣಸಾಗರ ವೀರ ಜಿನಪನ । ಚರಣ ಕಮಲವ ಪೂಜಿಪೇಂ ||ಚರುವಂ||

ಭಾನುರಾಜನು ಬಾನೊಳುದಿಸಲು | ಹೀನತಮ ಹರಿವಂದದಿ ||
ಜ್ಞಾನಕೇವಲ ಜ್ಯೋತಿಯಿಂ, ಅ- | ಜ್ಞಾನತಮವನು ಹರಿಯಲು ||
ರನ್ನಮೌಕ್ತಿಕ ಪಚ್ಚಕಾಂತಿಗ- | ಳನ್ನು ಮೀರುವ ದೀಪದಿಂ ||
ಜ್ಞಾನದಿನಕರ ವೀರಜಿನಪನ | ಸನ್ನುತಾಂಘ್ರಿಯ ಪೂಜಿಪೇಂ || ದೀಪಂ ||

ಗಗನಮಂಡಲ ವರಿಗೆ ಸೌರಭ | ಹೊಗೆಯು ಸೂಸುವ ತೆರದಲಿ |
ಅಗರು ಚಂದನ ಕಾಷ್ಟ ಪರಿಮಳ | ಗುಗ್ಗುಲಾದಿ ಸುಧೂಪದಿಂ ||
ಅಘ ನಿವಾರಣೆಗೈದು ಮುಕ್ತಿಯ | ಸೊಗೆವ ಬಗೆಯಲು ಬೇಗದಿಂ ||
ಸುಗುಣದಾಗರ ವೀರಜಿನಪನ | ಯುಗಲ ಚರಣವ ಪೂಜಿಪೇಂ |ಧೂಪಂ|

ಪರಮದಾಡಿಮ ದ್ರಾಕ್ಷಫಲ ಜಂ- | ಬೀರ ಕದಳೀ ಮಾದಳ ||
ಸುರಸಪೂರಿತ ಪಕ್ವಸುಮಧುರ | ಪರಿಪರಿಯ ಸತ್ಫಲಗಳಿಂ ||
ಸಿರಿಯ ಮುಕ್ತಿಯ ಮರೆದೊಳಿರ್ದನ- | ವರತ ಸೌಖ್ಯವ ಪಡೆಯಲು ||
ಅರುಹ ಶ್ರೀಮಹಾವೀರ ಜಿನಪನ | ಚರಣ ಪಂಕಜ ಪೂಜಿಪೇಂ |ಫಲಂ|

ವಾರಿಸೌರಭ ಗಂಧ ತಂಡುಲ | ಭಾರಿ ಪರಿಮಳ ಸುಮಗಳಿಂ ||
ಚಾರುತರ ನೈವೇದ್ಯ ದೀಪ ಸು- | ಭೂರಿ ಧೂಪ ಫಲಾರ್ಘ್ಯದಿಂ ||
ನಾರಸಿದ್ಧಿರ ಶೇರಿ ಶಿಲೆಯನ- | ಪಾರ ಸುಖವನು ಪೊಂದಲು ||
ನೀರ-ಮುಕ್ತಿಯ, ವೀರಜಿನಪನ | ವಾರಿಜಾಂಘ್ರಿಯ ಪೂಜಿಪೇಂ |ಅರ್ಘಂ|

ಧರೆಯೊಳೆಲ್ಲೆಡೆ ಶಾಂತಿ ಸುಖಗಳು | ನಿರುತ ವಿರಲೆಂಬಾಶೆಯಿಂ ||
ಪರಮ ನಿರ್ಮಲ ಶಾಂತಿಧಾರೆಯ | ನೆರೆವ ಪ್ರಾಸುಕ ವಾರಿಯಿಂ ||
ದುರಿತ ಕರ್ಮಗಳೆಂಟು ಬೇಗದಿ | ಹರಿದು ಮುಕ್ತಿಯ ನಗರದೊ-
ಳಿಹ ಶ್ರೀಮಹಾವೀರ ಜಿನಪನ | ಚರಣವಾರಿಜ ಪೂಜಿಪೇಂ |ಶಾಂತಿಧಾರಾ|

ಸಮವಶರಣದೊಳಮರ ವೃಂದವು | ಪೂಮಳೆಯ ಗರೆವಂದದಿ ||
ಕಮಲ ಮಲ್ಲಿಗೆ ಜಾಜಿ ಸಂಪಿಗೆ | ಸುಮಗಳಿಂದಲರಾಂಜಲಿ ||
ಅಮಲಭಾವದಿಗೈವೆ ಸ್ವಾತ್ಮನ | ಅಮಮ ಸುಖದಾಪೇಕ್ಷೆಯಿಂ ||
ಅಮರವಂದಿತ ವೀರಜಿನಪನ| ವಿಮಲ ಚರಣವ ಪೂಜಿಪೇಂ |ಪುಷ್ಪಾಂಜಲಿ|

---

# ಶ್ರೀಮಹಾವೀರ ಸ್ತವನ-

ಲೇಖಕಃ—ಶ್ರೀ. ದೇವೇಂದ್ರ ಕುಮಾರ ಪಾಟೀಲ, ಬಸವನ ಕುಡಚಿ.

( ಧಾಟಿ–ಕರೆಯುವೆ ನಿನ್ನ ಕಣ್ಮಣಿ...... )

ಮಂಗಲಮಯನೇ ಜಿನಪುಂಗವನೇ ನಾಥಾನ್ವಯನೇ ನಮೊ ನಮೋ ।
ಸಂತಶಿರೋಮಣಿ ಸವಿನಯ ಮೂರ್ತಿಯೇ ಹೇ ಸನ್ಮುನಿಯೆ
ನಮೋ ನಮೋ ॥

— ೧ —

ಅಳಿಯುತಿಹ ಜಿನಧರ್ಮದ ಮರ್ಮವನೇ ಶ್ರಾವಕವೃಂದಕೆ ಬೀರಿ ।
ಕಳೆಯೇರಿಸಿದ ಕಲಿಯೇ ಸನ್ಮತಿ ಧರ್ಮೋದ್ಧಾರಕ ಮೂರ್ತಿಯು ನೀನೇ ।
ಜೈ ಮಹಾವೀರಾ ಶ್ರೀಜಿನವರಾ ನಾಥಾನ್ವಯನೇ ನಮೋ ನಮೋ ॥

— ೨ —

ಧಾರ್ಮಿಕ ಜನರಿಗೆ ಸನ್ಮಾರ್ಗವನೇ ತೋರಿದ ವೀರನು ನೀನೆ ।
ಧರ್ಮದವನತಿಯ ಕಾರಣ ಕಂಡು ಮರ ಮರ ಮರುಗಿದ ಕರುಣೆಯು ನೀನೆ
ಅಹಿಂಸಾವಾದೀ ನೀನೇ ಜಗದೀ ನಾಥಾನ್ವಯನೇ ನಮೋ ನಮೋ ॥

— ೩ —

ಕೇಸರಿ ಲಾಂಛನದಿಂದಲಿ ಶೋಭಿಪ ವರ್ಧಮಾನನು ನೀನೆ ।
ಕೇಸರಿ ಗುಡಿಯನು ಗಗನಕೆ ಹಾರಸಿ ಧರ್ಮವ ರಕ್ಷಿಸಿದಾತನು ನೀನೇ ।
ಕಾಶ್ಯಪ ಮಣಿಯೆ ಸತ್ಯದ ಖಣಿಯೇ ನಾಥಾನ್ವಯನೇ ನಮೋ ನಮೋ ॥

— ೪ —

ರಾಗದ್ವೇಷಗಳನ್ನು ತೊರೆದೂ ಮಿಥ್ಯಾತ್ವವನೂ ಬಿಟ್ಟು ।
ಆತ್ಮವ ತಿಳಿದೂ ಮುಕ್ತಿಯ ಪಡೆದೂ ಭವವನು ನೀಗಿದ ಭವ್ಯನು ನೀನೇ ।
ಜೈ ಜಿನವರನೇ ಸದ್ಬೋಧಕನೇ ನಾಥಾನ್ವಯನೇ ನಮೋ ನಮೋ ॥

— ೫ —

ಜಿನಧರ್ಮದಲಿ ಉಸಿರನೇ ತುಂಬಿ ದಯಾಧರ್ಮವ ಬೀರಿ ।
ಧರ್ಮಕೆ ನವಚೇತನವನು ತುಂಬಿದ ಮಹಾಮಹಿವೀರ ಜಿನೇಶಾ ।
ಶ್ರೀಗುರುನಾಥಾ ವರಗುಣಕಾಂತಾ ನಾಥಾನ್ವಯನೇ ನಮೋ ನಮೋ ॥

ಶ್ರೀವೀತರಾಗಾಯನಮಃ

# ಅಥ ಶಾಂತಿನಾಥ ತೀರ್ಥಂಕರರ ಸ್ತೋತ್ರ

ನಾನಾವಿಚಿತ್ರೇ । ಬಹು ದುಃಖರಾಶೀ ।
ನಾನಾ ಪ್ರಕಾರೇ । ಮೋಹನಪಾಶೀ ॥ ಪಲ್ಲ ॥

ಪಾಪಾನಿ ದೋಷಾನಿ । ಅರಿಹಂತದೇವಾ ।
ತೇಕರ್ಮ ಬಂಧಭೇದಿ ದೇವಾದಿ ದೇವ ॥
ಇಹಜನ್ಮ ಶರಣಂ । ತವಶಾಂತಿನಾಥಂ ॥ ೧ ॥

ಸಂಸಾರ ಮಧ್ಯೆ ಮಿತ್ಯಾತ್ವಚಿಂತಾ ।
ಮಿತ್ಯಾಥ್ವ ಮಧ್ಯೆಕರ್ಮಾನು ಬಂಧಂ ।
ತೇಕರ್ಮಬಂಧ ಭೇದಿ । ದೇವಾದಿ ದೇವಾ ।
ಇಹಜನ್ಮ ಶರಣಂ । ತವ ಶಾಂತಿನಾಥಂ ॥ ೨ ॥

ಕಾಮಶ್ಯ ಕ್ರೋಧಂ । ಮಾಯಾವಿಲೋಭಂ ।
ಚತುರ ಕಷಾಯಹೆ । ತೇಜೀವಬಂಧಂ ।
ತೇಕರ್ಮ ಭಂಧ ಭೇಧಿ ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೩ ॥

ಜಾತಶ್ಯ ಮರಣಂ । ಜೋತಿಶ್ಯ ವಚನಂ ।
ತವಶಾಂತಿಜೀವಂ । ಬಹುಜನ್ಮ ದುಃಖಂ ।
ತೇ ಕರ್ಮಬಂಧ ಭೇದಿ । ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೪ ॥

ಮೃದುವಾಕ್ಯಹೀನ । ಕಠೀಣಚಿತ್ತಾ ।
ಪರಜೀವನಿಂದಾ । ಪರಶಾಂತಬಂಧಂ ।
ತೇಕರ್ಮ ಬಂಧಭೇದಿ । ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂನಾಥಂ ॥ ೫ ॥



ಚಾರಿತ್ರಹೀನಂ । ನರಜನ್ಮಮಧ್ಯೆ ।
ಸಮ್ಯಕ್ತ್ವರತ್ನಂ । ಪ್ರತಿಪಾದಯಂತೆ ।
ತೇಕರ್ಮಬಂಧ ಛೇದಿ ದೇವಾದಿ ದೇವಾ !
ಇಹಜನ್ಮ ಶರಣಂ । ತವಶಾಂತಿನಾಥಂ ॥ ೬ ॥

ಪುತ್ರಾದಿ ಮಿತ್ರಾ । ಕಲತ್ರಾದಿ ಬಂಧಂ ।
ಬಹುಜನ್ಮ ಮಧ್ಯೆ । ಬಹುಜೀವ ಬಂಧಂ।
ತೇಕರ್ಮಬಂಧ ಛೇದಿ ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೭ ॥

ಪರದ್ರವ್ಯಚೋರಿ । ಪರದ್ವಾರ ಸೇವಾ ।
ಹಿಂಸಾದಿ ಕಾಂಕ್ಷಾ । ಅನರ್ಥಬಂಡಾ ॥
ತೇಕರ್ಮ ಬಂದ ಛೇದಿ । ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೮ ॥

ಜಪತಿ ಪಠತಿ ನಿತ್ಯಂ । ಶಾಂತಿನಾಥ ಜಿನೇಂದ್ರಂ ।
ಸಸೋದಗಿರಿ ತಪಾಯ । ಪಾಪ ತಾಪಹರಾಯ ।
ತೇಕರ್ಮಬಂಧಛೇದಿ ! ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೯ ॥

ಶಿವಸುಖನಿತಾಂತಂ । ಸರ್ವಸಂಪತ್ತು ಹೇತು ।
ಬಹುದುಃಖ ನಿಹರಾಯ । ಶಾಂತಿನಾಥಂ ಜಿನೇಂದ್ರಂ ।
ತೇಕರ್ಮಬಂಧ ಛೇದಿ । ದೇವಾದಿ ದೇವಾ ।
ಇಹಜನ್ಮ ಶರಣಂ । ತವಶಾಂತಿನಾಥಂ ॥ ೧೦ ॥

**ಸಮಾಪ್ತ.**

ಭದ್ರಂ ಶುಭಂ ಮಂಗಲಂ

# ಅರಹಂತನ ಸ್ತುತಿ.

ಜಯಾಚಿ ಮಹಾ ಘೋರ ಕರ್ಮೇನಿ ಮಾಲಿ ।
ಖರೀ ಜ್ಞಾನ ದೃಷ್ಟಿ ಜಯಾ ಪ್ರಾಪ್ತ ಝಾಲೀ ॥
ಹಿತಾಚಾಚ ಜೋ ಮಾರ್ಗ ದಾವೀ ಜನಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೧ ॥

ಪರಂಜ್ಯೋತಿ ಜೋ ಕೇವಲಜ್ಞಾನ ಭಾನೂ ।
ಅಸೆ ಭವ್ಯ ಲೋಕಾಸ ಜೋ ಕಾಮಧೇನು ॥
ಜಯಾ ಪಾಹತಾ ಶಾಂತಿಹೋತೆ ಮನಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೨ ॥

ನಕೋ ಸಂಸೃತಿ ಚಾ ಪಸಾರಾ ಮನಾಲಾ ।
ಅಸೆ ಪೂರ್ಣ ವೈರಾಗ್ಯ ವಾಟೊನ ಜ್ಯಾಲಾ ॥
ತಪಾನೆ ಭವಾತೂನ ಜೋ ಮುಕ್ತ ಝಾಲಾ ।
ಸದಾ ಭಕ್ತಿ ಭಾವೆ ನಮೋ ತ್ಯಾ ಜಿನಾಲಾ ॥ ೩ ॥

ಸಭಾ ಮಂಡಪೀ ಅಂತರಾಳೀ ವಿಶಾಲ ।
ಜಣು ದಿವ್ಯ ಮೂರ್ತಿ ದಿಸೇ ಸೂರ್ಯಗೋಲ ॥
ಜಯಾ ವಾಚೂನಿ ಸೌಖ್ಯ ನಾಹಿ ಜನಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೪ ॥

ಜಯಾಚಿ ಮಹಾ ದಿವ್ಯವಾಣೀ ಉದೇಲಿ ।
ಖರೀ ಆತ್ಮ ತತ್ವ ಜಗಾ ದಾಖವೀಲಿ ॥
ಝಣೀನೇತಸೆ ಅಜ್ಞತಾ ಜೋ ಲಯಾಲಾ ।
ಸದಾ ಭಕ್ತಿ ಭಾವೆ ನಮೋ ತ್ಯಾ ಜಿನಾಲಾ ॥ ೫ ॥

ಜಯಾಚಾಯಶೋ ದುಂಧುಭೀ ನಿತ್ಯಗಾಜೆ ।
ಮಹಾಪ್ರಾತಿಹಾರ್ಯೆ ಸದಾಜೋ ವಿರಾಜೆ ॥
ಮಹೇಂದ್ರಾಸಜೋ ಸರ್ವದಾ ವಂದ್ಯ ಝಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೬ ॥

ಜಯಾಪಾಸುನಿ ಶೋಕಗೇಲಾ ಲಯಾಲಾ ।
ಮ್ಹಣೂನೀ ಅಶೋಕಾಸ ಜೋ ಪ್ರಾಪ್ತಝಾಲಾ ॥
ಟೆಳಾಜೋ ಅಸೆ ಖಾಸ ಭೂಮಂಡಳಾಲಾ ।
ಸದಾ ಭಕ್ತಿ ಭಾವೆ ನಮೋ ತ್ಯಾ ಜಿನಾಲಾ ॥ ೭ ॥

ಪ್ರಭಾಫಾಕಲೀ ಸರ್ವಲೋಕಾತ ಜ್ಯಾಚೀ ।
ಜಗೀಜಾಹಾಲೀ ಕೀರ್ತಿ ಜ್ಯಾಚಾ ಗುಣಾಚಿ ॥
ತ್ರಿಲೋಕಾಸ ಜೋ ಸರ್ವದಾ ವಂದ್ಯ ಝಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೮ ॥

ಜಯಾಚೀ ಮಹಾಭಾರತೀ ರತ್ನಮಾಲಾ ।
ಗಳಾ ಘಾಲುನೀ ಭೂಷವೀ ಜೋ ತನೂಲಾ ॥
ಖರಾಯಾ ಜಗೀತೋಚ ಜನ್ಮಾಸ ಆಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೯ ॥

ಮಹಾ ಮಂತ್ರ ಉಚ್ಚಾರಿತಾ ಜೀವಕಾನೇ ।
ಸುಖೇ ಸೋಡಲಾ ಪ್ರಾಣಜ್ಯಾ ಕುಕ್ಕುರಾನೇ ॥
ಜಯಾಚ್ಯಾ ಬಲೆ ತೋ ಪಹಾ ದೇವಝಾಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೧೦ ॥

ಜಯಾಚ್ಯಾ ಣಮೋಕಾರ ಮಂತ್ರೇ ಅನೇಕ ।
ಜಗೀಜಹಾಲೇ ಮುಕ್ತ ಯೋಗೀಂದ್ರ ಲೋಕ ॥
ಸಮುದ್ರಾಂತುನೀ ಭೂಪಹೀ ಪಾರಝಾಲಾ ।
ಸದಾ ಭಕ್ತಿ ಭಾವೆ ನಮೋ ತ್ಯಾ ಜಿನಾಲಾ ॥ ೧೧ ॥

ಜಲಿಮಂತ್ರ ಜ್ಯಾಚಾ ಲಿಹೂನಿ ಕಾರಾನೇ ।
ಸ್ವಯೇ ತ್ಯಾವರೀ ಠೇವಿಲಾ ಪಾಯಜಾನೇ ॥
ಮಹೀಪಾಲ ತೋ ಪೋಚಲಾ ದುರ್ಗತೀಲಾ ।
ಸದಾ ಭಕ್ತಿ ಭಾವೇ ನಮೋ ತ್ಯಾ ಜಿನಾಲಾ ॥ ೧೨ ॥

ಜಯಾಚೀ ಸದಾ ನಾಮ ಯೋಗೀಂದ್ರ ಘೇತೀ ।
ಸದಾ ಕೀರ್ತಿಗಾತಿ ಜಗೀ ಭವ್ಯಪಂಕ್ತಿ ॥
ಣವೋಕಾರ ಜಾಚ್ಯಾ ಜನಾ ಗೋಡಝಾಲಾ ।
ಸದಾ ಭಕ್ತಿ ಭಾವೇ ನವೋ ತ್ಯಾ ಜಿನಾಲಾ ॥ ೧೩ ॥

ಉತಾ ಬಂಧುನೋ ಆತವೂ ಯಾ ಪ್ರಭೂಲಾ ।
ಜಯಾಚಿ ಗುಣಾಚೀ ಸ್ತುತೀ ಗಾವಯಾಲಾ ॥
ಮುಖೀ ಆದರೆ ಲಃವೂಯಾಹೋ ಜನಾಲಾ ।
ಸದಾ ಭಕ್ತಿ ಭಾವೇ ನವೋ ತ್ಯಾ ಜಿನಾಲಾ ॥ ೧೪ ॥

# ಶಿಖರಜಿ ಸ್ತುತಿ.

ಶಂಕರಾಭರಣ ರಾಗ ಏಕ ತಾಳ

ಯಾತ್ರೆಯ ಮಾಡುವ ನಾವೀಗ । ಕ್ಷೇತ್ರವ ನೋಡುವ ಬಹು ಬೇಗ ! ಧಾತ್ರಿಯೊಳತಿಶಯವಾಗಿರುವಾ । ಕೀರ್ತಿಯು ಜಗದೊಳು ತುಂಬಿ ರುವಾ ॥ ಅ ಪ ॥ ಜಿನ ಮಂದಿರಗಳ ನೋಡುತಲೀ । ಜಿನನಾಥನ ದರ್ಶನ ಮಾಡುತಲೀ । ಘನ ಸಮ್ಯಕ್ತ್ವದಿ ಪೂಜಿಸುತಾ ಮುನಿಗಳ ಸಂಘವ ಸೇವಿ ಸುತಾ ॥ ೧ ॥ ಮುಕ್ತಾಗಿರಿ ಪಾವಾ ಪುರಿಯಾ । ಭಕ್ತಾದಿಗಳ್ಪೋಪ ಚಂಪಾಪುರಿಯಾ । ಆರ್ಥಿಯಿಂ ರಚಿಸಿದ ಆಬುಗಡವಾ । ಯುಕ್ತಿಲಿ ಗೈದ ಶತ್ರುಂಜಯವಾ ॥ ೨ ॥ ಉಜ್ಜಂತಗಿರಿನಾರ್ ಪರ್ವತವೋ ಗಜಪಂತ್ ರಾಮಟೆಕ್ ರಾಜಪುರಿಯೋ । ಅಜಮೀರ್ ಸೋನಾಗಿರಿ ಕಾನ್ಪುರವೊ । ರಾಜಗೃಹ ಬಹುಪೂಜಿತವೊ ॥ ೩ ॥ ಡಿಳ್ಳಿಯು ಜಯಪುರ ಸುಂದರವೊ । ಕಲ್ಕತ್ತ ಕಾಶಿಯು ಮಂದಿರವೊ । ಹೊಳೆಯುವ ಮೇಲಂತಸ್ತುಗಳೊ । ಥಳಥಳಿಸುವ ಜಿನ ಬಿಂಬಗಳೊ ॥ ೪ ॥ ಚಂದ್ರಾಪುರಿ ಸಿಂಹಾಪುರಿಯೋ ।

ಸೌಂದರ್ಯ ಅಯೋಧ್ಯ ಕುಂಥನಗಿರಿಯೊ | ಇಂದ್ರಭವನದ ಮಧುಬ ನವೊ | ಸೌಧರ್ಮೇಂದ್ರನ ಶಾಲಾಮಂದಿರವೊ || ೫ || ಸಮ್ಮೇದ ಸಿಖ ರಜಿ ನೋಡೋಣ | ಕರ್ಮಕ್ಷಯಗಳ ಕಾಣೋಣ | ಧರ್ಮವು ನಾಲ್ಕನು ಮಾಡೋಣ | ಕರ್ಮವು ಬೇಗದಿ ಕಳಿಯೋಣ || ೬ || ಅಂಗಜಾರಿಯ ಸ್ತೋತ್ರದಲೀ | ಮಂಗಲ ಸ್ತ್ರೀಯರು ವೋದದಲಿ | ಮಾಂಗಿ ತುಂಗಿ ಮಹತ್ವದಲೀ | ಶೃಂಗಾರ ರಥೋತ್ಸವ ನೋಡುತಲಿ || ೭ || ಮೇಧಿನಿ ಬಡವಾಣಿಯೊಳಿರುವ | ಆದಿ ಜಿನೇಶನು ನೆಲಸಿರುವಾ | ಸಿಧ್ವರ ಕೊಟೆ ಪ್ರಕಾಶಿಸುವಾ | ಪದ್ಮ ಪ್ರಭರನು ಪೂಜಿಸುವಾ || ೮ || ಜಿನದಾಸನು ರಚಿ ಸಿದ ಪದನೊಂದಾ | ಜಿನ ಶಾಸ್ತ್ರವ ಕೇಳಿರಿ ಮುದದಿಂದಾ | ಜಿನಧರ್ಮದಿ ನಡೆಯಿರಿ ನೀವೆಂದಾ | ಜಿನಭಕ್ತಿಯೆ ಮುಕ್ತಿಗೆ ಕಾರಣವೆಂದಾ || ೯ ||

( ೩೧ ) ಶಂಕರಾಭರಣ ರಾಗ ಏಕತಾಳ

ಯಾತ್ರೆಯು ಮಾಡಿದರೇನು ಫಲ | ಕ್ಷೇತ್ರವ ನೋಡಿದರೇನು ಫಲ ಧಾತ್ರ ಪಾತ್ರ ವಿಚಾರವನರಿಯದೆ | ಅರ್ಥವ ಘಳಿಸಿದರೇನು ಫಲ || ಅಪ || ಕುಟಿಲವ ಬಿಡದೆ ಕುಜನರು ಮಂತ್ರವ ಪಠನೆಯ ಮಾಡಿದರೇನು ಫಲ | ಸಟೆಯನಾಡುವರೆಲ್ಲ ಮನುಜರು ಬಂದೀ ನಟನೆಯ ಮಾಡಿದರೇನು ಫಲ || ೧ || ಕಪಟತನದೊಳು ಕಾಡುವ ಮನುಜರು ಜಪಗಳ ಮಾಡಿದ ರೇನು ಫಲ | ಕುಪಿತ ಬುದ್ಧಿಯ ಬಿಡದೆ ನಿರಂತರ ಉಪವಾಸವಿದ್ದರೇನು ಫಲ || ೨ || ಮಾತಾ ಪಿತರನು ಬಳಲಿಸುವಾತನು ಯಾತ್ರೆಯ ಮಾಡಿದ ರೇನು ಫಲ | ಘಾತಕತನವನು ಬಿಡದೆ ನಿರಂತರ ನೀತಿಯ ಪೇಳಿದರೇನು ಫಲ || ೩ || ಪತಿಯನು ನಿಂದಿಪ ಸತಿಯರು ಬೇಗದಿ ವ್ರತಗಳ ಮಾಡಿದ ರೇನು ಫಲ | ಅತಿಥಿಗಳೆಡೆಯಲಿ ಭೇದವ ಮಾಡಿ ಗತಿಯನು ಬಯಸಿದ ರೇನು ಫಲ || ೪ || ಹೀನ ಗುಣಂಗಳ ಬಿಡದೆ ನದಿಯಲಿ | ಸ್ನಾನವ ಮಾಡಿ ದರೇನು ಫಲ | ಜ್ಞಾನದಿ ಜಿನಪನ ಧ್ಯಾನವ ಮಾಡದೆ ಮೌನವ ಮಾಡಿದ ರೇನು ಫಲ || ೫ ||

# ಶಿಖರ್ಜಿಯ ದರ್ಶನದ ಪದ.

ಸಂಮೇದ ಗಿರಿ ಸಿದ್ದ ಕ್ಷೇತ್ರ ಪುಣ್ಯಪಾತ್ರಾ ಆ ಕ್ಷೇತ್ರದರ್ಶನ ಮಾಡದವರ ಜನ್ಮ ವ್ಯರ್ಥ | ಅವರ ಜನ್ಮವ್ಯರ್ಥ || ಪಲ್ಲವಿ || ಎಲ್ಲ ಜಾತಿಯವರಿಗಿದು ಒಂದೇ ರೀತಿ ಎಲ್ಲ ಪಾಪನಾಶ ಮಾಳ್ಪಪುಣ್ಯ ಕ್ಷೇತ್ರ | ಅದು ಪುಣ್ಯಕ್ಷೇತ್ರ || ೧ || ಅನಾದಿಸಿದ್ಧ ಗಗನ ಚುಂಬಿತ ಇಪ್ಪತ್ತು ಕೂಟ ಅನಾದಿ ತೀರ್ಥಂಕರರಿಗಿದು ಮುಕ್ತಿ ಕ್ಷೇತ್ರ ಅದು ಮುಕ್ತಿ ಕ್ಷೇತ್ರ || ೨ || ಅಸಂಖ್ಯಾ ಮುನಿಗಳಲ್ಲಿ ಮುಕ್ತರಾದರೂ ಅಸಂಖ್ಯಾತ ಭವ್ಯಜನರು ಭವಗಳಳಿವರು | ಆವರು ಭವಗಳಳಿವರು || ೩ || ಅಭವ್ಯ ಜನರು ಅಲ್ಲಿ ಹೋಗಿ ದರ್ಶನಾಗದು | ಭವ್ಯ ಜನರು ಅಲ್ಲಿ ಹೋಗಿ ಮುಕ್ತಿ ಪಡೆವರು ಅವರು ಮುಕ್ತಿ ಪಡೆವರು || ೪ || ನರಕಾಯು ಕಟ್ಟಿದವರಿಗೆ ದರ್ಶನಾಗದು | ದರ್ಶನಾಗದು | ದರ್ಶನಾದ ಜೀವಿಗಳಿಗೆ ಮುಕ್ತಿತಪ್ಪದು | ಅಹಾ ಮುಕ್ತಿ ತಪ್ಪದೂ || ೫ || ನಲವತ್ತೊಂಬತ್ತು ಭವದೊಳಗೆ ಮುಕ್ತರೆಂದೂ | ಆದಿಜನರು ಪೇಳ್ದ ವಾಕ್ಯ ನಂಬು ನೀನು ನಂಬು ನೀನು || ೬ || ಆಪ್ತರಿಷ್ಟರೆಲ್ಲ ಕೂಡಿ ಹೋಗಬೇಕು ಜೈನರಾಗಿ ಪಾಪನಾಶಮಾಡಬೇಕು | ಅಹಾಃ ಮಾಡಬೇಕು || ೭ || ಎಲ್ಲ ಮುಕ್ತಜೀವಿಗಳಿಗೆ ಅರ್ಗ್ಯವೆತ್ತಿರೀ ಅರ್ಗ್ಯವೆತ್ತಿದವರ | ಅಷ್ಟಕರ್ಮನಾಶ | ಅಹಾ ಕರ್ಮನಾಶ || ೮ || ಶಾಂತಿಧಾರೆ ಮಾಡಿ ಶಾಂತರಾಗಿರಿ | ಅಹಾ ಶಾಂತಾರಾಗಿರಿ | ಚಿಂತೆಯನ್ನು ನೀಗಿ ಪುಷ್ಪಾಂಜಲಿಯ ಮಾಡಿರಿ | ಅಹಾ ಧನ್ಯರಾಗರಿ || ೯ || ಶ್ರೀ ||

---

## "ವರ್ತಮಾನ ಕಾಲದ ಇಪ್ಪತ್ತನಾಲ್ಕು ತೀರ್ಥಂಕರರ ಹೆಸರು ಮತ್ತು ಲಾಂಛನಗಳು" :—

ವರ್ತಮಾನ ಚೋವಿಸ ಜಿನಾಂಚೇ ಲಾಂಛನ ಚೋವಿಸ |
ಭವ್ಯ ಜನಾತಾಲಾ ನಿತ್ಯ ಸ್ಮರಾಯಾ ಕೇಲೇಕವನಾಸ || ೧ ||

೧) ಋಷಭಜಿನಾಲಾ 'ಬೈಲ' ಶೋಭತೋ, 'ಹತ್ತೀ' ೨) ಅಜಿತಾಸ (೩) ಸಂಭವನಾಥಾ 'ಘೋಡಾ' 'ವಾನರ' (೪) ಅಭಿನಂದನ ಪ್ರಭುಸ || ೨ ||

(೫) ಸುಮತಿ ಜಿನೇಂದ್ರಾ 'ಚಕವಾ' ಪಕ್ಷೀ 'ಪದ್ಮ' (೬) ಪದ್ಮಪ್ರಭುಲಾ | ದೇವ (೭) ಸುಪಾರ್ಶ್ವ 'ಸ್ವಸ್ತಿಕ' ಸಾಜೇ, 'ಚಂದ್ರ' (೮) ಚಂದ್ರಪ್ರಭುಲಾ || ೩ ||

(೯) ಪುಷ್ಪದಂತ ಪದಿ 'ಮಗರ' ವಿರಾಜೇ (೧೦) ಶೀತಲ 'ಶ್ರೀವೃಕ್ಷ' (೧೧) ಶ್ರೇಯಾಂಸಾತೆ ಗೇಂಡಾ ಚಿನ್ಹಚಿ (೧೨) ವಾಸುಪೂಜ್ಯ 'ಮಹಿಷ' || ೪ ||

(೧೩) ವಿಮಲ ಜಿನಾಂಚಿ 'ಸೂಕರ' ಲಾಂಛನ (೧೪) ಅನಂತ 'ಸಾಯಾಳ' | 'ವಜ್ರ' ಚಿನ್ಹತೆ (೧೫) ಧರ್ಮ ಜಿನಾಂಚಿ (೧೬) ಶಾಂತಿ 'ಹರಿಣ' ಬಾಳ || ೫ ||

(೧೭) ಕುಂಥೂನಾಥಾ 'ಬಕರಾ' ಸಾಜೇ (೧೮) ಅರಹನಾಥ 'ಮೀನ' (೧೯) ಮಲ್ಲಿ 'ಕುಂಭ' (೨೦) ಮುನಿ ಸುವ್ರತ 'ಕಾಸವ' (೨೧) ನಮಿಸ 'ನೀಲಕಮಲ' || ೫ ||

(೨೨) ನೇಮಿಜಿನಾತೇ 'ಶಂಖ' ಶೋಭವೀ (೨೩) ಪಾರ್ಶ್ವ 'ಸರ್ಪಫಣಾ' | ನಮಸ್ಕಾರ ತ್ಯಾ ವೀರ(೨೪) ಪ್ರಭುಚ್ಯಾ 'ಸಿಂಹಾಂಕಿತ' ಚರಣಾ || ೬ ||

ಬೇರೆ ಕೆಲವು ಹೆಸರುಗಳು:—ಋಷಭನಾಥರಿಗೆ—ಆದಿನಾಥ, ಪುಷ್ಪದಂತರಿಗೆ—ಸುವಿಧಿನಾಥ, ಮಹಾವೀರರಿಗೆ—ವರ್ಧಮಾನ, ಸನ್ಮತಿ, ವೀರ, ಅತಿವೀರರೆಂದು ಹೆಸರುಗಳಿವೆ.

---

## ಶ್ರೀ ೧೦೮ ಜೈನ ದಿಗಂಬರ ಮುನಿಗಳ

# ಆಹಾರದಾನ ವಿಧಿ.

೧ ನಮೋಸ್ತು ಮಹಾರಾಜ ನಮೋಸ್ತು ನಮೋಸ್ತು ತಿಷ್ಠ ತಿಷ್ಠ ತಿಷ್ಠ ಎಂದು ಅನ್ನಬೇಕು,

ಮುನಿಗಳು ನಿಂತ ಮೇಲೆ ಅವರನ್ನು ತಮ್ಮ ಬಲಕ್ಕೆ ಹಾಕಿ ಮೂರು ಪ್ರದಕ್ಷಿಣೆಗಳನ್ನು ಹಾಕಬೇಕು.

ಆ ಮೇಲೆ "ಆಹಾರ ನೀರು ಶುದ್ಧ ಅದೆ ಮಿಥ್ಯಾತ್ವ ಬಿಟ್ಟಿರುತ್ತೇವೆ. ನಮ್ಮ ಮನೆಗೆ ಆಹಾರಕ್ಕೆ ಬರಬೇಕು" ಅಂದು ಜಲದಿಂದ ಭೂಮೀ ಶುದ್ಧ ಮಾಡುತ್ತಾ ಮುಂದಾಗಬೇಕು. ಕೆಳಗೆ ಬರೆದ ಮಂತ್ರ ಉಚ್ಚರಿಸಬೇಕು.

"ಭೂಮಿ ಶುದ್ಧೀಕಾರಣಂ ಕುರು ಕುರು ಸ್ವಾಹಾ"

೨ ಪೀಠ ಶುದ್ಧಿ ಕುರು ಕುರು ಸ್ವಾಹಾ ಎಂದು ಅಂದು ಉಚ್ಛಾಸನದ ಮೇಲೆ ಕೂಡ್ರಿಸಬೇಕು.

೩ ಮುನಿಗಳು ಮಣೆಯ ಮೇಲೆ ಕುಳಿತುಕೊಂಡ ಬಳಿಕ ಅವರ ಮುಂದೆ ಒಂದು ಹರವಾದ ಬಾಯಿಯುಳ್ಳ ಪಾತ್ರೆಯಿಟ್ಟು 'ಪಾದ ಶುದ್ಧಿಂ ಕುರು ಕುರು ಸ್ವಾಹಾ' ಅನ್ನುತ್ತ ಮುನಿಗಳ ಎರಡು ಪಾದಗಳನ್ನು ಬಿಸಿ ನೀರಿನಿಂದ ತೊಳೆಯಬೇಕು.

೪ ಆ ಮೇಲೆ ಪಾದ ತೊಳೆದಂಥ ಜಲವನ್ನು ( ಗಂಧೋದಕ ತಮ್ಮ ಮಸ್ತಕದ ಮೇಲೆ ಹಾಕಿಕೊಳ್ಳಬೇಕು ).

೫ ಆ ಮೇಲೆ ಒಂದು ಮಣೆಯ ಮೇಲೆ ಅಷ್ಟವಿಧ ದ್ರವ್ಯದಿಂದ ಪೂಜೆ ಯನ್ನು ಮಾಡಬೇಕು.

# ಪೂಜಾವಿಧಿ.

ಪಂಚ ಗುರು ವಂದೇ ೫ ಪಂ.




೩ ರಯಣ ತ್ರಯಂಚ ವಂದೆ



---

(೧) ರಯಣತ್ರಯಂಚ ವಂದೇ ಅಂದರೆಃ—ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ತ್ರ ಚಾರಿತ್ರಕ್ಕೆವಂದನೆ.

(೨) ಚೋವೀಸ ಜಿನಂಚ ಸವ್ವದಾವಂದೆ ,, :—೨೪ ತೀರ್ಥಂಕರರಿಗೆ ವಂದನೆ

(೩) ಪಂಚ ಗುರಣಾಂ ವಂದೆ ,, :—ಅರಿಹಂತ, ಸಿದ್ಧ, ಆಚಾರ್ಯ ಉಪಾಧ್ಯಾಯರಿಗೆ ವಂದನೆ.

(೪) ಚಾರಣ ಚರಣಂ ಸದಾ ವಂದೆ ,, :—ಚಾರಣ ಮುನಿಗಳಿಗೆ ಯಾವತ್ತೂ ವಂದನಾ.

(೫) ಪ್ರಥಮಾನುಯೋಗ ಅಂದರೆ:—೬೩ ಶಲಾಖಾ ಪುರುಷರ ಕಥೆಯನ್ನು ಯಾವ ಶಾಸ್ತ್ರದಲ್ಲಿ ಹೇಳಿದೆ ಅದು ಪ್ರಥಮಾನುಯೋಗ.

(೬) ಕರಣಾನುಯೋಗ ಅಂದರೆ:—ಮೂರೂ ಲೋಕದ ವಿಸ್ತಾರ ಯಾವ ಶಾಸ್ತ್ರದಲ್ಲಿ ಹೇಳಿದೆ ಅದು ಕರಣಾನುಯೋಗ.

(೭) ಚರಣಾನುಯೋಗ ಅಂದರೆಃ—ಮುನಿಧರ್ಮ, ಶ್ರಾವಕಧರ್ಮ ಯಾವ ಶಾಸ್ತ್ರದಲ್ಲಿ ಹೇಳಿದೆ ಅದು ಚರಣಾನುಯೋಗ.

(೮) ದ್ರವ್ಯಾನುಯೋಗ ಅಂದರೆ:—ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಕಾಲ ಇ. ದ್ರವ್ಯ ಶಾಸ್ತ್ರದಲ್ಲಿ ಹೇಳಿದ್ದಕ್ಕೆ ದ್ರವ್ಯಾನುಯೋಗವೆನ್ನುವರು.

## ಶ್ರುತ ಪೂಜೆ.

ಸಶೀಂ ಶ್ರುತ ಸ್ಕಂಧವನೇ ವಿಹಾರಿಣಿ ।
ಮನೇಕಶ್ಯಾಖಾ ಗಹನೇ ಸರಸ್ವತೀ ॥
ಗುರುಪ್ರವಾ ಹೇಣ ಜಟಾನು ಕಂಪಿನಾ ।
ಸ್ತುವೇಽಭಿ ವಂದೇ ವನ ದೇವತಾಮಿಹ ॥

ಓಂ ಹ್ರೀಂ ದ್ವಾದಶಾಂಗ ಶ್ರುತ ಶಾರದಾದೇವಿ ಅತ್ರಾ ಅವತರ ಅವತರ ತಿಷ್ಠ ತಿಷ್ಠ ಠ ಠ ಆಹ್ವಾಹನ ಸ್ಥಾಪನಂ ಸನ್ನಿಧಿ ಕರಣಿಂ । ಜಲ ಗಂಧಾಕ್ಷತೆ ಪುಷ್ಪ ಚರುವರ ದೀಪ ಧೂಪ ಫಲದಿಂ । ಭಕ್ತಿ ಭಾವದಿಂ ಪೂಜೆಯಗೈಯುತೆ ಮುಕ್ತಿ ಸುಖಕಾಗಿ ಓಂ ಹ್ರೀಂ ಶ್ರುತ ಶಾರದಾದೇವಿಗೆ ದಿವ್ಯ ಅರ್ಘ್ಯಂ ನಿರ್ವಪಾಮಿ ಸ್ವಾಹಾ. ಶಾಂತಿದಾರ್ ಪುಷ್ಪಾಂಜಲಿ ಕ್ಷಿಪೇತ್.

## ಗಣಧರ ಪೂಜೆ.

ಯೇಃ ಯೆನಗಾರಾ ಖುಷಯೋ ಯತೀಂದ್ರಾ ।
ಮುನೀಶ್ವರಾ ಭವ್ಯ ಭವದ್ವ್ಯತೀತಾಃ ॥
ತೇಷಾಂ ವ್ರತೀನಾಂ ಪದ ಪಂಕಜಾನಿ ।
ಸಂಪೂಜ ಯಾಮೋ ಗುಣಶೀಲ ಸಿದ್ಧೈವಳ ॥

ಓಂ ಹ್ರೀಂ ಗಣಧರ ಚರಣೋಭ್ಯೋ ಅತ್ರಾ ಅವತರ ಅವತರ ತಿಷ್ಠ ತಿಷ್ಠ ಠ ಠ ಅವಾಹನ ಸ್ಥಾಪನಂ ಸನ್ನಿಧಿ ಕಾರಣಂ ।

ಜಲ ಗಂಧಾಕ್ಷತ ಪುಷ್ಪಂ ಚರುವರ ದೀಪ ದೂಪ ಫಲದಿಂ ।
ಭಕ್ತಿ ಭಾವದಿಂ ಪೂಜೆಯ ಗೈಯುವೆ ಮುಕ್ತಿಯ ಸುಖಕಾಗಿ ॥

ಓಂ ಹ್ರೀಂ ಗಣಧರ ಚರಣಭ್ಯೋ ಪುಷ್ಪಾಂಜಲಿ ಕ್ಷಿಪೇತ್
ಪೂರ್ಣ ಅರ್ಘ್ಯಂ ನಿರ್ವಪಾಮಿಸ್ವಾಹಾ ಶಾಂತಿದಾರ್ ಪುಷ್ಪಾಂಜಲಿ ಕ್ಷಿಪೇತ.

# ಮಹಾಮುನಿ ಪೂಜಾ.

ಓಂ ಹ್ರೀಂ ಮಹಾಮುನಿ ಮಹಾರಾಜ ಅತ್ರಾ ಅವತರ ಅವತರ ತಿಷ್ಠ ತಿಷ್ಠ ಠ ಠ ಆವಾಹನ ಸ್ಥಾಪನಂ ಸನ್ನಿಧಿ ಕರಣಂ ।

ಓಂ ಹ್ರೀಂ ಮುನಿಮಹಾಜ ಚರಣಭ್ಯೋ ಜನ್ಮಜರಾ ಮೃತ್ಯು ವಿನಾಶಯ ಜಲಂ ನಿರ್ವಪಾಮಿ ಸ್ವಾಹಾ ॥ ಜಲಂ ॥

ಓಂ ಹ್ರೀಂ ಮುನಿಮಹಾರಾಜ ಚರಣಭ್ಯೋ ಸಂಸಾರ ತಾಪ ವಿನಾಶಯ ಚಂದನಂ ನಿರ್ವಪಾಮಿ ಸ್ವಾಹಾ ॥ ಗಂಧಂ ॥

ಓಂಹ್ರೀಂ ಮುನಿಮಹಾರಾಜ ಚರಣಭ್ಯೋ ಅಕ್ಷಯಸುಖಪ್ರಾಪ್ತಯೆ ಅಕ್ಷತಂನಿರ್ವಪಾಮಿಸ್ವಾಃ

ಓಂ ಹ್ರೀಂ ಮುನಿಮಹಾರಾಜ ಚರಣಭ್ಯೋ ಕಾಮಬಾಣ ವಿಧ್ವಂಸನಾಯ ಪುಷ್ಪಂ ನಿರ್ವಪಾಮಿ ಸ್ವಾಹಾ ॥ ಪುಷ್ಪಂ ॥

ಓಂ ಹ್ರೀಂ ಮುನಿ ಮಹಾರಾಜ ಚರಣಭ್ಯೋ ಕ್ಷುದಾ ರೋಗ ವಿನಾಶನಾಯ ನೈವೇದ್ಯ ನಿರ್ವಪಾಮಿ ಸ್ವಾಹಾ ॥ ನೈವೇದ್ಯಂ ॥

ಓಂ ಹ್ರೀಂ ಮುನಿ ಮಹಾರಾಜ ಚರಣಭ್ಯೋ ಮೋಹಾಂಧಕಾರ ವಿನಾಶನಾಯ ದೀಪಂ ನಿರ್ವಪಾಮಿ ಸ್ವಾಹಾ ॥ ದೀಪಂ ॥

ಓಂ ಹ್ರೀಂ ಮುನಿ ಮಹಾರಾಜ ಚರಣಭ್ಯೋ ಅಷ್ಟಕರ್ಮ ದಹನಾಯ ಧೂಪಂ ನಿರ್ವಪಾಮಿ ಸ್ವಾಹಾ ॥ ಧೂಪಂ ॥

ಓಂ ಹ್ರೀಂ ಮೋಕ್ಷಫಲ ಪ್ರಾಪ್ತಯೇ ಫಲಂ ನಿರ್ವಪಾಮಿ ಸ್ವಾಹಾ ॥ ಫಲಂ ॥

ಓಂ ಹ್ರೀಂ ಮುನಿ ಮಹಾರಾಜ ಚರಣಭ್ಯೋ ಅನರ್ಘಂ ಪದ ಪ್ರಾಪ್ತಯೇ ಅರ್ಘಂ ನಿರ್ವಪಾಮಿ ಸ್ವಾಹಾ ॥ ಅರ್ಘಂ ॥

ಶಾಂತಿಂ ಶಾಂತಿ ಧಾರಯತಿ ಪುಷ್ಪಾಂಜಲಿ ಕ್ಷಪೇತ.

೬ ಮನಶುದ್ಧಿ ವಚನಶುದ್ಧಿ ಕಾಯಶುದ್ಧಿ ಆಹಾರ ನೀರು ಶುದ್ಧ ಅವೆ ಸ್ವಾಮಿನ್ ಸ್ವೀಕರಿಸಬೇಕು. ಪ್ರತಿಯೊಂದು ಕಾರ್ಯಕ್ಕೆ ಬಿಸಿ ನೀರು ಉಪಯೋಗ ಮಾಡಬೇಕು. ತಣ್ಣೀರು ಉಪಯೋಗಿಸಬಾರದು.

ಪೂಜೆ ಆದ ಮೇಲೆ ತನ್ನ ಕೈಯನ್ನು ಹಿಟ್ಟು ಹಚ್ಚಿಕೊಂಡು ಮೂರು ಸರತಿ ಅರ್ಘಂ ತೊಳೆದುಕೊಳ್ಳಬೇಕು. ಆ ಮೇಲೆ ತಾಟ ವಗೈರೆ ಶುದ್ಧ ಮಾಡಿ ಭೋಜನ ಸಾಮಗ್ರಿಯನ್ನು ತಾಟದಲ್ಲಿಡಬೇಕು. ಮತ್ತು ಕಾಯ, ವಾಚಾ, ಮನಸಿನಿಂದ ಅನ್ನ ನೀರು ಶುದ್ಧ ಅದೆ ಗ್ರಹಣ ಮಾಡಬೇಕು. ಹೀಗೆ ಅಂದು ನಮೋಸ್ತು ಸ್ವಾಮಿನ್ ಹಸ್ತ ಶುದ್ಧ ಕಾರಣಂ ಕುರು ಕುರು ಸ್ವಃ ಹೀಗೆ ಅಂದು ಅವರ ಕೈಮೇಲೆ ಕೈ ತೊಳೆದುಕೊಳ್ಳಲಿಕ್ಕೆ ನೀರು ಮತ್ತು ಹಿಟ್ಟು ಹಾಕಬೇಕು. ಆ ಮೇಲೆ ಬಿಸಿನೀರನ್ನು ಮೂರು ವೇಳೆ ಸ್ವಲ್ಪ ಸ್ವಲ್ಪ ಕೊಡಬೇಕು. ಆ ಮೇಲೆ ಅನ್ನವನ್ನು ಕೊಡಬೇಕು.

ಮಧ್ಯದಲ್ಲಿ ನೀರು ವಗೈರೆ ಪದಾರ್ಥಗಳನ್ನು ಕೊಡುತ್ತಾ ಹೋಗಬೇಕು.

ಈ ಪ್ರಕಾರ ಅನ್ನ ಕೊಡುವದು ಮುಗಿದ ಮೇಲೆ ಅವರ ಕೈ ವಗೈರೆ ತೊಳೆದು ಸ್ವಚ್ಛ ಮಾಡಿ ಅರಿವೆಯಿಂದ ಒರಿಸಬೇಕು. ಅವರ ಪ್ರತ್ಯಾಖ್ಯಾನಾದಿ ಕ್ರಿಯಾ ಆದ ಮೇಲೆ ಎರಡನೆ ಕಡೆಗೆ ಆಸನ ಹಾಕಿ ಕೂಡ್ರಿಸಬೇಕು. ಎಲ್ಲರು ನಮೋಸ್ತು ಮಾಡಿ ಅವರ ಆಶೀರ್ವಾದ ತೆಗೆದುಕೊಳ್ಳಬೇಕು. ಆ ಮೇಲೆ ಅವರ ಕಮಂಡಲು ಸ್ವಚ್ಛ ತೊಳೆದು ಅದರಲ್ಲಿ ಬಿಸಿ ನೀರನ್ನು ತುಂಬಿ ಆನಂದದಿಂದ ಜಯಜಯಕಾರವನ್ನು ಮಾಡುತ್ತಾ ಅವರ ಕಾಲುಗಳ ಮೇಲೆ ಪುಷ್ಪವನ್ನು ಅರ್ಪಿಸಬೇಕು. ಆದರದಿಂದ ಅವರ ಸ್ಥಾನಕ್ಕೆ ಮುಟ್ಟಿಸಬೇಕು.

---

|| ಶ್ರೀವೀತರಾಗಾಯ ನಮಃ | ಶ್ರೀಚಂದ್ರನಾಥಾಯ ನಮಃ ||

# ಅಥ ಗುರು ಪೂಜಾ ಪ್ರಾರಂಭವು.



ಪೂಜಾ ಪೂಜಾ ಪೂಜಾ ಗುರುರಾಜನಾ ಯತಿರಾಜನಾ |
ಮುನಿರಾಜನಾ ನಿಜಗುಣಸಂಪದನಾ || ಪೂಜಾ ಪೂಜಾ ಪೂಜಾ || ಪಲ್ಲ ||

ಪಂಚಮಹಾವ್ರತ ಪಾಲಿಸುವ ಪಂಚ ಸಮಿತಿಯ ಸಾಧಿಸಿದಾ |
ಪಂಚಮಗತಿಯ ನಾಧಿಪ ಯೋಗಿಯ ಪಾದವ ಪೂಜಿಪೆನಾ ||
ಗಂಗಾ ಸಿಂಧು ಜಲತಂದು ಕರ್ಪೂರ ಕೇಶರ ಕೂಡಿಸಿ |
ಪಾಪಮಲವನು ನಾಶಗೊಳಿಸಲು ಪ್ರಕ್ಷಾಲನೆ ಗೈವೇ || ಓಂ ಹ್ರೀಂ ......
ಜಲಂ || ೧ ||

ಪಂಚಯಿಂದ್ರಿಯಗಳ ಜೈಸಿ ಶಮದಮ ಗುಣಗಳ |
ಪಾಲಿಸುವಾ ಪಾವನ ಯೋಗಿಯ ಪಾದಪದ್ಮವಾ ಪೂಜೆಯಗೈಯುವೆನಾ ||
ಮೈಲಾಗಿರಿ ಚಂದನನಾ ತಂದು ಸುಗಂಧ ಗಂಧವ ಬೀರುತಲಿ |
ಯೋಗಿರಾಜನ ಪಾದಪದ್ಮಕೆ ಲೇಪಗೈಯುವೆನಾ || ಪೂಜಾ ಪೂಜಾ
ಗಂಧಂ || ೨ ||

ಷಡಾವಶ್ಯಕ ಪಾಲಿಸುವಾ ಸಪ್ತಗುಣಗಳ ಧರಿಸಿರುವಾ |
ಮೂರು ಗುಪ್ತಿಯ ಪಾಲಿಪ ಯೋಗಿಯ ಪಾದವ ಪೂಜಿಪೆನಾ ||
ಅಖಂಡ ಅಕ್ಷತಗಳ ತಂದು ಅಕ್ಷಯ ಸುಖವನು ಪಡೆಯಲು ನಾಂ |
ಭಕ್ತಿಭಾವದಿಂ ಅರ್ಪಣೆಗೈದು ಸುಗತಿಯ ನಾಧಿಪೆನಾ || ಪೂಜಾ ಪೂಜಾ
ಅಕ್ಷತಂ || ೩ ||

ಕ್ರೋಧಮಾನ ಜೈಸಿರುವಾ ಕ್ಷಮಾಭಾವವ ಧರಿಸಿರುವಾ |
ಕಾಮಬಾಣವಾ ಜೈಸಿದ ಯೋಗಿಯ ಪಾದವ ಪೂಜೆಯ ಗೈಯುವೆನಾ ||
ದುಂಡುಮಲ್ಲಿಗೆ ನಾಂ ತಂದು ಜಾಜ ಸಂಪಿಗಿ ಕೂಡಿಸಿ |
ಗುಲಾಬ ಕೇತಕಿ ತಂದು ಗುರುಗಳ ಪಾದಕೆ ಅರ್ಪಿಸುವೆ || ಪೂಜಾ ಪೂಜಾ
ಪುಷ್ಪಂ || ೪ ||

ಸಮ ಸಂತೋಷ ಜಲದಿಂದೆ ಲೋಭ ಮಲವನು ತೊಳದಿರುವಾ
ಜ್ಞಾನಾಮೃತ ಪಾನಮಾಡುವ ಯೋಗಿಯ ಪೂಜಿಪೆನಾಂ ||
ಬುಂದೆ ಲಡ್ಡುಗಿ ಬರ್ಪಿಗಳಾಂ ಶಾಕಪಾಕ ಪಾಯಸವಾ |
ಕ್ಷುದಾರೋಗವಾ ನಾಶಗೊಳಿಸಲು ಅರ್ಪಣೆ ಗೈಯುವೆನಾ || ಪೂಜಾ
ಚರುಂ || ೫ ||

ಅಜ್ಞಾನಂಧ ಹರಿಸಿರುವಾ ಸುಜ್ಞಾನಜ್ಯೋತಿ ಬೆಳಗಿರುವಾ |
ಸಹಜಾನಂದ ಯೋಗಿಯ ಪಾದಕೆ ಭಕ್ತಿಲೆ ಬೆಳಗುವೆನಾ ||
ಪಂಚರತ್ನದ ಆರತಿಯಾ ಕರ್ಪೂರ ತುಪ್ಪದ ಜ್ಯೋತಿಗಳಾ |
ಅಜ್ಞಾನಂಧಃಕಾರ ಹರಿಯುಲಿಯೆಂದು ಬೆಳಗುವೆನಾನಿಂದು || ಪೂಜಾ
ದೀಪಂ || ೬ ||

ಕರ್ಮಕಾಷ್ಟ ದಹಿಸಲು ತಾ ಹೋಮಕುಂಡ ರಚಿಸಿರುವಾ |
ಧ್ಯಾನಗ್ನಿಯಲೀ ಕರ್ಮವ ಧಹಿಸುವ ಯೋಗಿಯ ಪೂಜಿಪೆನಾ ||
ಅಗರು ತಗರು ಚಂದನಾದಿ ಪರಿಮಳ ದ್ರವ್ಯ ಮಿಶ್ರಿತಾ |
ಧೂಪವ ಹಾಕಿ ಬೆಳಗುವೆನಿಂದು ಗುರುಚರಣಕೆ ನಾನು || ಪೂಜಾ
ಧೂಪಂ || ೭ ||

ಯೋಗಸಾಧನ ಶಕ್ತಿಯಿಂವೇ ಋದ್ಧಿ ಸಿದ್ಧಿ ಪಡೆದಿರುವಾ |
ಮೋಕ್ಷ ಫಲವನು ಸಾಧಿಪ ಯತಿಯ ಪಾದಕೆ ಅರ್ಪಿಸುವೆ ||
ತೆಂಗು ನಾರಂಗಿ ಕದಲೀ ಭದಾಮ ಪಿಸ್ತೆ ಆ ಕ್ರೋಡಾ |
ಮೋಕ್ಷ ಫಲವನು ಸಾಧಿಸಲೋಸುಗ ಅರ್ಪಣಗೈಯುವೆನಾ || ಪೂಜಾ
ಫಲಂ || ೮ ||

ಅನರ್ಘ್ಯ ಪದವ ಸಾಧಿಸುವಾ ಸಹಜ ಯೋಗಿಯನಿಸಿರುವಾ |
ನಿತ್ಯಾನಂದನ ಪಾದಪದ್ಮವಾ ಪೂಜೆಯ ಗೈಯುವೆನಾ ||
ಜಲ ಗಂಧಾಕ್ಷತ ಪುಷ್ಪ ಚರು ದೀಪ ಧೂಪ ಫಲದಿಂದ |
ಅನರ್ಘ್ಯ ಪದವಾ ಸಾಧಿಸಲೆಂದು ಅರ್ಪಣ ಗೈಯುವೆನಾ || ಪೂಜಾ
ಅರ್ಘ್ಯಂ || ೯ ||

# ಅಥ ಚೋವೀಸ ತೀರ್ಥಂಕರ ಪೂಜಾ.

ಅರಿ ಭಗವಾನ ನಮುನಿ ಜಿನಾ ಶುದ್ಧ ಮನೆ ।
ಗಾವು ಆನಂದೇ ಪ್ರೇಮ ಭರಾನೆ ಪ್ರೇಮ ಭರಾನೇ ॥ ಪಲ್ಲ ॥
ಸ್ಥಾಪನ ಕರುಯಾ ಶಿವಪದರಮಣಾ ।
ಧಾವಿ ಜಗತಿ ಸತ್ಪಥ ಸುಜನಾ ।
ಅರಹಂತ ಕರು ಸ್ಥಾಪನಾ ಸುಭಾವನನಾ ॥
ಅರಿ ಭಗವಾನ್ ನಮುನಿ ಜನಾ ಶುದ್ಧ ಮನೆ ।
ಗಾವು ಆನಂದೇ ಪ್ರೇಮ ಭರಾನೆ ಪ್ರೇಮ ಭರಾನೆ ॥

ಓಂ ಹ್ರೀಂ ಭೋ ಅರಹತ್ಪರಮೇಷ್ಟಿನೇ ಅತ್ರಾ ಅವತರ ಅವತರ ಸಂವೌ ಷಟ್ ಆಹ್ವಾನ ಸ್ಥಾಪನಂ ಸನ್ನಿಧಿಕರಣಂ ॥

## ಅಷ್ಟಕ.

ಪೂಜಾ ಪೂಜಾ ಪೂಜಾ ಸಕಲ ಜಿನರಾಜ ಕರು ಸಮ್ಮೇದ ಪದಿ ಭಕ್ತಿ ।
ಕೈಲಾಸ ಗಡ ಗಿರನಾರ ಚಂಪಾಪಾಲಾವೀರ ನಮಿ ಕಾಂತಿ ॥ ಪಲ್ಲ ॥
ಸುವರ್ಣ ಕಲಶಾ ಸಲಿಲಾ ವಿಮಲಾ ಜಲಾ ಶೀತಲಾ । ವಿಮಲಾ ಜಲಾ ಶೀತಲಾ ॥
ಜನನಾಸ ನಿ ಮರಣ್ಯಾಸ ಮಿ ಹರಣ್ಯಾಸ ಯಾ ಜಗತಿ । ಕೈಲಾಸ ಗಡ ಗಿರನಾರ ॥ ಜಲಂ ॥ ೧
ಸುಗಂಧ ಚಂದನ ಗಂಧ ಸುಖಕಂದದೆ ಆನಂದ । ಸುಖಕಂದವೆ ಆನಂದ ।
ಭವಬಂಧ ಹೋ ನಿಃಕಂದ ಶ್ರೀಜಿನಚಂದ ಚರಣಾಂತಿ ॥ ಕೈಲಾಸಗಡ ಗಿರನಾರ ॥ ಗಂಧಂ ॥ ೨
ಸುವಾಸ ತಂದುಲಾಸ ಹರಣ್ಯಾಸ ಹಾ ಭವಪಾಸ । ಹಾ ಭವಪಾಸ ।
ಹೀರಾಸ ಪದಕಮಲಾಸ ಆರ್ಪುಣ ಆಸ ಒಂದು ಯಾ ಜಗತಿ ॥ ಕೈಲಾಸಗಡ ಗಿರನಾರ ॥ ಅಕ್ಷತಂ ॥ ೩

ಜಾತಿ ಆತೀ ಪುಷ್ಪೇತೀ ನಾನಾ ಪ್ರಕಾರೆತೀ । ನಾನಾ ಪ್ರಕಾರೇತೀ ।
ಕಮಲೇತೀ ವಾಹೂ ಮಾಲತೀ ಸುಗಂಧ ಲೇಪಂತೀ ॥ ಕೈಲಾಸಗಡ ಗಿರನಾರ
॥ ಪುಷ್ಪಂ ॥ ೪

ಪಕ್ವಾನ್ನ ನಾನಾ ಪರಿಚೀ ರುಚಿಯುಕ್ತ ಸುರಸಾಚೀ । ರುಚಿಯುಕ್ತ
ಸುರಸಾಚೀ ।
ಷಡ್ರಸಾಚೀ ಥಾಲಸಾಚೀ ಭೂಕಶಮಣ್ಯಾತಾ ॥ ಕೈಲಾಸಗಡ ಗಿರನಾರ
॥ ಚರುಂ ॥೫

ಘೃತಯುಕ್ತ ಉಜ್ವಲ ಆರತಿ ತಮರೂಪ । ಜ್ಞಾನಾತ ತಮರೂಪ ।
ಘೇವುನಿ ಹಾತಿ ತಿ ಪ್ರಭೋಲಾವು ತುಪ್ಪಾ ಪುಡತಿ । ಕೈಲಾಸ ಗಡ
ಗಿರನಾರ ॥ ದೀಪಂ ॥ ೬

ಧೂಪ ದಗ್ಧ ಕರಿ ಮಮ ಪಾಪ ಕರ್ಮರೂಪಿತಾಪ । ಕರ್ಮರೂಪಿತಾಪ ।
ಭವತಾಪ ಹಾ ಸಂತಾಪ ಆಮೊ ಆಪಯಾ ಜಗತಿ ॥ ಕೈಲಾಸಗಡ
ಗಿರನಾರ ॥ ಧೂಪಂ ॥ ೭

ಫಲ ಆಮ ಶ್ರೀಫಲ ಜಾಮ ಶ್ರೀರಾಮಫಲ ಬದಾಮ । ಶ್ರೀರಾಮಫಲ
ಬದಾಮ !
ದಾಳಿಂಬ ಕೇಳೀ ಸೀತಾಫಲ ಫಳ ಮಿಳಣ್ಯಾ ಮುಕ್ತಿ । ಕೈಲಾಸಗಡ
ಗಿರನಾರ ॥ ಫಲಂ ॥ ೮

ಜಲಗಂಧ ಅಕ್ಷತ ಪುಷ್ಪ ಚರು ದೀಪ ಧೂಪ ಫಲ ಅರ್ಘ್ಯ। ದೀಪ ಧೂಪ
ಫಲ ಅರ್ಘ್ಯ ।
ಪಾತ್ರಿ ಭರೋನಿ ವಾಹು ತಿ ಮಿಳಣ್ಯಾಸ ಭವಿ ಶಾಂತಿ ॥ ಕೈಲಾಸಗಡ
ಗಿರನಾರ ॥ ಅರ್ಘ್ಯಂ ॥ ೯



# ತೀರ್ಥಂಕರರನ್ನು ಕುರಿತು ಪ್ರಶ್ನೋತ್ತರಗಳು.

ಪ್ರಶ್ನೆ—ಯಾರಿಗೆ ತೀರ್ಥಂಕರರೆನ್ನುತ್ತಾರೆ ?

ಉತ್ತರ—ಎಲ್ಲಕ್ಕೂ ಉತ್ತಮವಾದ ಜಿನಧರ್ಮತೀರ್ಥವನ್ನು ಪ್ರವರ್ತಿಸು ವವರಿಗೆ

ಪ್ರಶ್ನೆ—ಅವರು ಎಷ್ಟು ಜನರು ಇರುವರು ?

ಉ.—ಈ ಭರತಕ್ಷೇತ್ರದಲ್ಲಿ ೩ ಚೋವೀಸೀ (೭೨) ತೀರ್ಥಂಕರರೆಂದು ಜಿನಾಗಮವು ಹೇಳುವದು.

ಪ್ರ.—ಅದು ಹೇಗೆ ?

ಉ.—ಅತೀತ ಚೋವೀಸೀ, ಅನಾಗತ ಚೋವೀಸೀ, ವರ್ತಮಾನ ಚೋವೀಸಿ. ಅಂದರೆ ಭೂತಕಾಲದ ೨೪, ವರ್ತಮಾನಕಾಲದ ೨೪, ಮತ್ತು ಭವಿಷ್ಯಕಾಲದ ೨೪ ಅಂತೂ ೭೨ ತೀರ್ಥಂಕರರು.

ಪ್ರ.—ತೀರ್ಥಂಕರರ ಜನ್ಮಭೂಮಿಯು ಯಾವದು ?

ಉ.—ಎಲ್ಲ ತೀರ್ಥಂಕರರ ಜನ್ಮಭೂಮಿಯು ಅಯೋಧ್ಯೆಯು. ಆದರೆ ಕಾಲ ದೋಷದಿಂದ ಕೆಲವು ತೀರ್ಥಂಕರರ ಜನ್ಮವು ಬೇರೆ ಸ್ಥಳಗಳಲ್ಲಿ ಆಗಿದೆ.

ಪ್ರ.—ತೀರ್ಥಂಕರರು ಯಾವ ಸ್ಥಳದಲ್ಲಿ ಮೋಕ್ಷ ಹೊಂದಿದರು ?

ಉ.—ಅವರು ಶ್ರೀಸಮ್ಮೇದಶಿಖರದಲ್ಲಿ ಮೋಕ್ಷಹೊಂದಿದರು. ಆದರೆ ಕಾಲ ದೋಷದಿಂದ ೪ ಜನರು ಅನ್ಯ ಸ್ಥಳಗಳಲ್ಲಿ ಮೋಕ್ಷವನ್ನು ಹೊಂದಿದರು

ಪ್ರ.—ಅನ್ಯ ಸ್ಥಳಗಳಲ್ಲಿ ಮೋಕ್ಷಪಡೆದವರು ಯಾರು ?

ಉ —೧ ಕೈಲಾಸಗಿರಿಯಲ್ಲಿ ಶ್ರೀಆದಿನಾಥಸ್ವಾಮಿಯವರು, ೨ ಚಂಪಾಪುರಿ ಯಲ್ಲಿ ಶ್ರೀವಾಸುಪೂಜ್ಯರು, ೩ ಗಿರನಾರದಲ್ಲಿ ನೇಮಿನಾಥರು, ೪ ಪಾವಾಪುರಿಯಲ್ಲಿ ಶ್ರೀವರ್ಧಮಾನ ಸ್ವಾಮಿಯವರು ಮುಕ್ತಿಯನ್ನು ಹೊಂದಿದರು.

ಪ್ರ.—ತೀರ್ಥಂಕರರ ಭಾಷೆ ಯಾವದು ?

ಉ.—ಮಾಗಧೀ.

ಪ್ರ —ಅವರ ಭಾಷೆ ಯಾರಿಗೆ ತಿಳಿಯುತ್ತಿತ್ತು ?

ಉ.—ಗಣಧರರಿಗೆ. ಅವರು ಅದನ್ನು ತಿಳಕೊಂಡು ಸಮವಸರಣದಲ್ಲಿ ಎಲ್ಲ ಸಭಿಕರಿಗೆ ಸಂಸ್ಕೃತದೊಳಗೆ ಹೇಳುತ್ತಿದ್ದರು.

ಪ್ರ.—ಸಮ್ಮೇದಶಿಖರದಲ್ಲಿ ಎಷ್ಟು ತೀರ್ಥಂಕರರು ಮುಕ್ತಿಯನ್ನು ಪಡೆದರು?

ಉ.—ಅಸಂಖ್ಯಾತ ಜನರು.

# ವರ್ತಮಾನಕಾಲದ, ೨೪ ತೀರ್ಥಂಕರರ

| | ತೀರ್ಥಂಕರ | ಜನ್ಮನಗರ. | ತಾಯಿಯ ಹೆ. | ತಂದೆಯ ಹೆಸರು. |
|---|---|---|---|---|
| ೧ | ಋಷಭ | ಸಾಕೇತ | ಮರುದೇವಿ | ನಾಭಿರಾಜ |
| ೨ | ಅಜಿತ | ಸಾಕೇತ | ವಿಜಯಾದೇವಿ | ಜಿತಶತ್ರುರಾಜ |
| ೩ | ಸಂಭವ | ಶ್ರಾವಸ್ತಿ | ಸುಷೇಣಾದೇವಿ | ಜಿತಾರಿರಾಜ |
| ೪ | ಅಭಿನಂದನ | ಅಯೋಧ್ಯೆ | ಸಿದ್ಧಾರ್ಥಾದೇವಿ | ಸಂಬರರಾಜ |
| ೫ | ಸುಮತಿ | ಸಾಕೇತ | ಮಂಗಲಾದೇವಿ | ಮೇಘಪ್ರಭರಾಜ. |
| ೬ | ಪದ್ಮಪ್ರಭ | ಕೌಶಂಬಿ | ಸುಷಮಾದೇವಿ | ಧಾರಣರಾಜ |
| ೭ | ಸುಪಾರ್ಶ್ವ | ವಾರಾಣಸಿ | ಪೃಥ್ವಿದೇವಿ | ಸುಪ್ರತಿಷ್ಠರಾಜ |
| ೮ | ಚಂದ್ರಪ್ರಭ | ಚಂದ್ರಪುರಿ | ಸುಲಕ್ಷಣಾದೇವಿ | ಮಹಾಸೇನರಾಜ. |
| ೯ | ಪುಷ್ಪದಂತ | ಕಾಕಂದಿ | ರಾಮಾದೇವಿ | ಸುಗ್ರೀವರಾಜ. |
| ೧೦ | ಶೀತಲ | ಭದ್ರಪುರ | ಸುನಂದಾದೇವಿ | ದೃಢರಥರಾಜ |
| ೧೧ | ಶ್ರೀಯಾಂಸ | ಸಿಂಹಪುರ | ವಿಮಲಾದೇವಿ | ವಿಮಲವಾಹನ |
| ೧೨ | ವಾಸುಪೂಜ್ಯ | ಚಂಪಾಪುರ | ವಿಜಯಾದೇವಿ | ವಸುಪೂಜ್ಯ |

# ತಾಯಿ, ತಂದೆ ಮತ್ತು ಅವರ ಲಾಂಛನಾದಿಗಳು.

| ವರ್ಣ | ಲಾಂಛನ. | ಧನು ಎತ್ತರ | ಆಯುಷ್ಯ | ಗಣಧರ. |
|---|---|---|---|---|
| ಹೇಮವರ್ಣ | ವೃಷಭ | ೫೦೦ | ೮೪ ಲಕ್ಷ ಪೂರ್ವ | ೮೪ |
| ಹೇಮವರ್ಣ | ಆನೆ | ೪೫೦ | ೭೨ ಲಕ್ಷ ಪೂರ್ವ | ೯೦ |
| ಹೇಮವರ್ಣ | ಅಶ್ವ | ೪೦೦ | ೬೩ ಲಕ್ಷ ಪೂರ್ವ | ೧೦೫ |
| ಹೇಮವರ್ಣ | ಕಪಿ | ೩೫೦ | ೫೦ ಲಕ್ಷ ಪೂರ್ವ | ೧೦೩ |
| ಹೇಮವರ್ಣ | ಚಕ್ರವಾಕ | ೩೦೦ | ೪೦ ಲಕ್ಷ ಪೂರ್ವ | ೧೧೬. |
| ಆರಕ್ತವರ್ಣ | ಕಮಲ | ೨೫೦ | ೩೦ ಲಕ್ಷ ಪೂರ್ವ | ೧೧೧ |
| ನೀಲವರ್ಣ | ಸ್ವಸ್ತಿಕ | ೨೦೦ | ೨೦ ಲಕ್ಷ ಪೂರ್ವ | ೯೫ |
| ಶ್ವೇತವರ್ಣ | ಚಂದ್ರ | ೧೫೦ | ೧೦ ಲಕ್ಷ ಪೂರ್ವ | ೯೩ |
| ಶ್ವೇತವರ್ಣ | ಮಕರ | ೧೦೦ | ೨ ಲಕ್ಷ ಪೂರ್ವ | ೮೮ |
| ಹೇಮವರ್ಣ | ಕಲ್ಪವೃಕ್ಷ | ೯೦ | ೧ ಲಕ್ಷ ಪೂರ್ವ | ೮೧ |
| ಹೇಮವರ್ಣ | ಗಂಡಕ | ೮೦ | ೮೪ ಲಕ್ಷ ವರ್ಷ | ೭೭ |
| ಆರಕ್ತವರ್ಣ | ಮಹಿಷ | ೭೦ | ೭೨ ಲಕ್ಷ ವರ್ಷ | ೬೬ |

# ವರ್ತಮಾನಕಾಲದ, ೨೪ ತೀರ್ಥಂಕರರ

| | ತೀರ್ಥಂಕರ | ಜನ್ಮನಗರ. | ತಾಯಿಯ ಹೆಸರು | ತಂದೆಯ ಹೆಸರು |
|---|---|---|---|---|
| ೧೩ | ವಿಮಲನಾಥ | ಕಪಿಲಾಪುರ | ಸುರಮ್ಯಾದೇವಿ | ಕೃತವರ್ಮ |
| ೧೪ | ಅನಂತನಾಥ | ಅಯೋಧ್ಯಾ | ಜಯಶಾಮಾದೇವಿ | ಸಿಂಹಸೇನ |
| ೧೫ | ಧರ್ಮನಾಥ | ರತ್ನಪುರ | ಸುವ್ರತಾದೇವಿ | ಭಾನುರಾಜ |
| ೧೬ | ಶಾಂತಿನಾಥ | ಗಜಪುರ | ಐರಾದೇವಿ | ವಿಶ್ವಸೇನರಾಜ |
| ೧೭ | ಕುಂಥುನಾಥ | ಗಜಪುರ | ಶ್ರೀಕಾಂತಾದೇವಿ | ಶೂರಸೇನರಾಜ |
| ೧೮ | ಅರಹನಾಥ | ರಾಜಪುರ | ಸುಮಿತ್ರಾದೇವಿ | ಸುದರ್ಶನರಾಜ |
| ೧೯ | ಮಲ್ಲಿನಾಥ | ಮಿಥಿಲಾನಗರ | ಸುಪ್ರಭಾದೇವಿ | ಕುಂಭರಾಜ |
| ೨೦ | ಮುನಿಸುವ್ರತ | ರಾಜಗೃಹೀ | ಪದ್ಮಾವತಿದೇವಿ | ಸುಮಿತ್ರಾರಾಜ |
| ೨೧ | ನಮಿನಾಥ | ಮಥುರಾಪುರ | ವಪ್ರಾದೇವಿ | ವಿಜಯರಾಜ |
| ೨೨ | ನೇಮಿನಾಥ | ದ್ವಾರಕಾಪುರ | ಶಿವದೇವಿ | ಸಮುದ್ರವಿಜಯ |
| ೨೩ | ಪಾರ್ಶ್ವನಾಥ | ವಾರಾಣಸೀ | ವಾಮಾದೇವಿ | ವಿಶ್ವಸೇನರಾಜ |
| ೨೪ | ಮಹಾವೀರ | ಕೌಂಡಣ್ಯಪು. | ತ್ರಿಶಲಾದೇವಿ | ಸಿದ್ಧಾರ್ಥರಾಜ |

# ತಾಯಿ, ತಂದಿ ಮತ್ತು ಅವರ ಲಾಂಛನಾದಿಗಳು.

| ವರ್ಣ | ಲಾಂಛನ. | ಧನುಷ್ಯ ಎತ್ತರ | ಆಯುಷ್ಯ. | ಗಣಧರ |
|---|---|---|---|---|
| ಹೇಮವರ್ಣ | ವರಾಹ | ೬೦ | ೬೦ ಲಕ್ಷ ವರ್ಷ | ೫೫ |
| ಹೇಮವರ್ಣ | ಕರಡಿ | ೫೦ | ೩೦ ಲಕ್ಷ ವರ್ಷ | ೫೦ |
| ಹೇಮವರ್ಣ | ವಜ್ರ | ೪೫ | ೧೦ ಲಕ್ಷ ವರ್ಷ | ೪೩ |
| ಹೇಮವರ್ಣ | ಮೃಗ | ೪೦ | ೧ ಲಕ್ಷ ವರ್ಷ | ೩೬ |
| ಹೇಮವರ್ಣ | ಮೇಷ | ೩೫ | ೯೫ ಸಾವಿರ ವರ್ಷ | ೩೫ |
| ಹೇಮವರ್ಣ | ಮೀನ | ೩೦ | ೮೪ ಸಾವಿರ ವರ್ಷ | ೩೦ |
| ಹೇಮವರ್ಣ | ಕುಂಭ | ೨೫ | ೫೫ ಸಾವಿರ ವರ್ಷ | ೨೮ |
| ಶಾಮವರ್ಣ | ಕೂರ್ಮ | ೨೦ | ೩೦ ಸಾವಿರ ವರ್ಷ | ೧೮ |
| ಹೇಮವರ್ಣ | ನೀಲಕಮಲ | ೧೫ | ೧೦ ಸಾವಿರ ವರ್ಷ | ೧೭ |
| ಶಾಮವರ್ಣ | ಶಂಖ | ೧೦ | ೧ ಸಾವಿರ ವರ್ಷ | ೧೧ |
| ಹರಿತವರ್ಣ | ಸರ್ಪ | ೯ ಮೊಳ | ೧೦೦ ವರ್ಷ | ೧೦ |
| ಹೇಮವರ್ಣ | ಸಿಂಹ | ೭ ಮೊಳ | ೭೨ ವರ್ಷ | ೧೧ |

# ಭವಿಷ್ಯಕಾಲದ ೨೪ ತೀರ್ಥಂಕರರನ್ನು ಕುರಿತು

| ನಂ. | ಅನಾಗತ ತೀರ್ಥಂಕರರ ಹೆಸರು. | ಯಾರ ಜೀವವು ತೀರ್ಥಂಕರ ಪದವಿಯನ್ನು ಹೊಂದುವವೋ ಅವರ ಹೆಸರುಗಳು. |
|---|---|---|
| ೧ | ಮಹಾಪದ್ಮ | ಶ್ರೇಣಿಕರಾಜನ ಜೀವ |
| ೨ | ಸುರದೇವ | ದ್ವಿಪಿಷ್ಟ ನಾರಾಯಣ (೨ನೇ) |
| ೩ | ಸುಪಾರ್ಶ್ವ | ಸ್ವಯಂಭು ನಾರಾಯಣ (೩ನೇ) |
| ೪ | ಸ್ವಯಂಪ್ರಭ | ಪುರುಷೋತ್ತಮ ನಾರಾಯಣ (೪ನೇ) |
| ೫ | ಸರ್ವಾತ್ಮಭೂತ | ಪುರುಷಸಿಂಹ ನಾರಾಯಣ (೫ನೇ) |
| ೬ | ದೇವಪುತ್ರ | ಪುಂಡರೀಕ ನಾರಾಯಣ (೬ನೇ) |
| ೭ | ಕುಲಪುತ್ರ | ದತ್ತದೇವ ನಾರಾಯಣ (೭ನೇ) |
| ೮ | ಉದಂಕ | ಅಶ್ವಗ್ರೀವ ಪ್ರತಿನಾರಾಯಣ (೧ನೇ) |
| ೯ | ಪ್ರೌಷ್ಠಿಲ | ತಾರಕ ಪ್ರತಿನಾರಾಯಣ (೨ನೇ) |
| ೧೦ | ಜಯಕೀರ್ತಿ | ಮೇರಕ ಪ್ರತಿ ನಾರಾಯಣ (೩ನೇ) |
| ೧೧ | ಮುನಿಸುವೃತ | ನಿಶುಂಭ ಪ್ರತಿನಾರಾಯಣ (೪ನೇ) |
| ೧೨ | ಅರ | ಮಧುಕೈಟಭ ಪ್ರತಿನಾರಾಯಣ (೫ನೇ) |

# ಸ್ಪಷ್ಟೀಕರಣವು.

| ಎಲ್ಲಿಂದ ಬರುವರು. | ವರ್ಷಾಯುಃ. | ಎತ್ತರ | ಅಂತರಕಾಲ ಪ್ರಮಾಣ. |
|---|---|---|---|
| ೧ನೇ ನರಕ | ೧೧೬ | ೭ ಮೊಳ | ೪೨೦೦೦ ವರ್ಷ |
| ೬ನೇ ನರಕ | ೧೨೦ | ೯ ಮೊಳ | ೨೫೦ ವರ್ಷ |
| ೬ನೇ ನರಕ | ೧೦೦೦ | ೧೦ ಧನುಷ್ಯ | ೪೩೦೦೦ ವರ್ಷ |
| ೬ನೇ ನರಕ | ೧೦೦೦೦ | ೧೫ ಧ. | ೫೦೦೦೦೦ ವರ್ಷ |
| ೬ನೇ ನರಕ | ೩೦೦೦೦ | ೨೦ ಧ. | ೬೦೦೦೦೦ ವರ್ಷ |
| ೬ನೇ ನರಕ | ೫೫೦೦೦ | ೨೫ ಧ. | ೫೪೦೦೦೦೦ ವರ್ಷ |
| ೫ನೇ ನರಕ | ೮೪೦೦೦ | ೩೦ ಧ. | ೧೨೧೦೦೦೦೦ ವರ್ಷ |
| ೭ನೇ ನರಕ | ೯೫೦೦೦ | ೩೫ ಧ. | ಪಾವ ಪಲ್ಯ |
| ೬ನೇ ನರಕ | ೧೦೦೦೦೦ | ೪೦ ಧ. | ಅರ್ಧ ಪಲ್ಯ |
| ೬ನೇ ನರಕ | ೧೦೦೦೦೦೦ | ೪೫ ಧ. | ೩ ಲಕ್ಷ ಸಾಗರ |
| ೬ನೇ ನರಕ | ೩೦೦೦೦೦೦ | ೫೦ ಧ. | ೪ ಲಕ್ಷ ಸಾಗರ |
| ೬ನೇ ನರಕ | ೬೦೦೦೦೦೦ | ೬೦ ಧ. | ೯ ಲಕ್ಷ ಸಾಗರ |

# ಭವಿಷ್ಯತ್ಕಾಲದ ೨೪ ತೀರ್ಥಂಕರರನ್ನು ಕುರಿತು

| ಸಂ. | ಅನಾಗತ ತೀರ್ಥಂಕರರ ಹೆಸರು. | ಯಾರ ಜೀವವು ತೀರ್ಥಂಕರ ಪದವಿಯನ್ನು ಹೊಂದುವವೋ ಅವರ ಹೆಸರುಗಳು. |
|---|---|---|
| ೧೩ | ನಿಷ್ಪಾಪ | ಪ್ರಲ್ಹಾದ ಪ್ರತಿನಾರಾಯಣ (೬ನೇ) |
| ೧೪ | ನಿಷ್ಕಷಾಯ | ಬಲೀ ಪ್ರತಿನಾರಾಯಣ (೭ನೇ) |
| ೧೫ | ವಿಪುಲ | ರಾವಣ ಪ್ರತಿನಾರಾಯಣ (೮ನೇ) |
| ೧೬ | ನಿರ್ಮಲ | ಕೃಷ್ಣ ನಾರಾಯಣ (೯ನೇ) |
| ೧೭ | ಚಿತ್ರಗುಪ್ತ | ಜರಾಸಂಧ ಪ್ರತಿನಾರಾಯಣ (೯ನೇ) |
| ೧೮ | ಸಮಾಧಿಗುಪ್ತ | ಮಘವಾ ಚಕ್ರವರ್ತಿ (೩ನೇ) |
| ೧೯ | ಸ್ವಯಂಭೂ | ಸನತ್ಕುಮಾರ ಚಕ್ರವರ್ತಿ (೪ನೇ) |
| ೨೦ | ಅನಿವೃತ್ತಕ | ಸುಭೌಮ ಚಕ್ರವರ್ತಿ (೮ನೇ) |
| ೨೧ | ಜಯನಾಥ | ಬ್ರಹ್ಮದತ್ತ (೧೨ನೇ) |
| ೨೨ | ವಿಮಲ | ಪದ್ಮಬಲಿಭದ್ರ (೯ನೆ) |
| ೨೩ | ದೇವಪಾಲ | ಸಮಂತಭದ್ರ |
| ೨೪ | ಅನಂತವೀರ್ಯ | ಸಾತ್ಯಕೀರುದ್ರ (೧೧ನೇ) |

# ಸ್ಪಷ್ಟೀಕರಣವು.

| ಎಲ್ಲಿಂದ ಬರುವರು. | ಪರ್ಯಾಯು. | ಎತ್ತರ. | ಅಂತರ ಕಾಲ ಪ್ರಮಾಣ. |
|---|---|---|---|
| ೬ನೇ ನರಕ | ೭೨ ಲಕ್ಷ | ೭೦ ಧನುಷ್ಯ | ೩೦ ಲಕ್ಷ ಸಾಗರ |
| ೫ನೇ ನರಕ | ೮೪ ಲಕ್ಷ | ೮೦ ಧ. | ೫೪ ಲಕ್ಷ ಸಾಗರ |
| ೪ನೇ ನರಕ | ೧ ಲ. ಪೂರ್ವ | ೯೦ ಧ. | ೯೯ ಲಕ್ಷ ಸಾಗರ |
| ೩ನೇ ನರಕ | ೨ ಲ. ಪೂ. | ೧೦೦ ಧ. | ೯ ಕೋಟಿ ಸಾಗರ |
| ೩ನೇ ನರಕ | ೧೦ ಲ. ಪೂ. | ೧೫೦ ಧ. | ೯೦ ಕೋಟಿ ಸಾಗರ |
| ೩ನೇ ಸ್ವರ್ಗ | ೨೦ ಲ. ಪೂ. | ೨೦೦ ಧ. | ೯೦೦ ಕೋಟಿ ಸಾಗರ |
| ೩ನೇ ಸ್ವರ್ಗ | ೩೦ ಲ. ಪೂ. | ೨೫೦ ಧ. | ೯ ಸಹಸ್ರಕೋಟಿಸಾಗರ |
| ೭ನೇ ನರಕ | ೪೦ ಲ. ಪೂ. | ೩೦೦ ಧ. | ೯೦ ಸಹಸ್ರ ,, ಸಾಗರ |
| ೭ನೇ ನರಕ | ೫೦ ಲ. ಪೂ. | ೩೫೦ ಧ | ೯ ಲಕ್ಷ ಕೋಟಿ ಸಾಗರ |
| ೫ನೇ ಸ್ವರ್ಗ | ೬೦ ಲ. ಪೂ. | ೪೦೦ ಧ. | ೧೦ ಲಕ್ಷ ಕೋಟಿ ಸಾ. |
| ೧ನೇ ,, | ೭೨ ಲ. ಪೂ. | ೪೫೦ ಧ. | ೩೦ ಲಕ್ಷ ಕೋಟಿ ಸಾ. |
| ೩ನೇ ನರಕ | ೧ ಕೋ. ಪೂ. | ೫೦೦ ಧ. | ೫೦ ಲಕ್ಷ ಕೋಟಿ ಸಾ. |

## ವಿದೇಹ ಕ್ಷೇತ್ರದೊಳಗಿನ ೨೦ ತೀರ್ಥಂಕರರು.

೧ ಶ್ರೀಮಂಧರ, ೨ ಯುಗ್ಮಂಧರ, ೩ ಬಾಹು, ೪ ಸುಬಾಹು, ೫ ಸಂಜಾತಕ, ೬ ಸ್ವಯಂಪ್ರಭ, ೭ ವೃಷಭಾನನ, ೮ ಅನಂತವೀರ್ಯ, ೯ ಸುರಪ್ರಭ, ೧೦ ವಿಶಾಲಕೀರ್ತಿ, ೧೧ ವಜ್ರಧರ, ೧೨ ಚಂದ್ರಾನನ, ೧೩ ಚಂದ್ರಬಾಹು, ೧೪ ಭುಜಂಗಮು, ೧೫ ಈಶ್ವರ, ೧೬ ನೇಮುಪ್ರಭ, ೧೭ ವೀರಸೇನ, ೧೮ ಮಹಾಭದ್ರ, ೧೯ ದೇವಯಶ, ೨೦ ಅಜಿತವೀರ್ಯ.

## ೨೪ ಕಾಮದೇವರು.

೧ ಬಾಹುಬಲೀ, ೨ ಪ್ರಜಾಪತಿ, ೩ ಶ್ರೀಧರ, ೪ ದರ್ಶನಭದ್ರ, ೫ ಪ್ರಸೇನಚಂದ್ರ, ೬ ಚಂದ್ರವರ್ಣ, ೭ ಅಗ್ನಿಯುಕ್ತ, ೮ ಸನತ್ಕುಮಾರ, ೯ ವತ್ಸರಾಜ, ೧೦ ಕನಕಪ್ರಭ, ೧೧ ಮೇಘಪ್ರಭ, ೧೨ ಶಾಂತಿನಾಥ, ೧೩ ಕುಂಥುನಾಥ, ೧೪ ಅರಹನಾಥ, ೧೫ ವಿಜಯರಾಜ, ೧೬ ಶ್ರೀಚಂದ್ರ, ೧೭ ನಲರಾಜ, ೧೮ ಹನುಮಂತ, ೧೯ ಬಲಿರಾಜ, ೨೦ ವಸುದೇವ, ೨೧ ಪ್ರದ್ಯುಮ್ನ, ೨೨ ನಾಗಕುಮಾರ, ೨೩ ಜೀವಂಧರ, ೨೪ ಜಂಬೂಸ್ವಾಮೀ.

## ೧೪ ಕುಲಂಕರರು.

೧ ಪ್ರತಿಶ್ರುತಿ, ೨ ಸನ್ಮತಿ, ೩ ಕ್ಷೇಮಂಕರ, ೪ ಕ್ಷೇಮಂಧರ, ೫ ಸೀಮಂಕರ, ೬ ಸೀಮಂಧರ, ೭ ವಿಮಲವಾಹನ, ೮ ಚಕ್ಷುಷ್ಮಾನ್, ೯ ಯಶಸ್ವಾನ್, ೧೦ ಅಭಿಚಂದ್ರ, ೧೧ ಚಂದ್ರಾಭ, ೧೨ ಮರುದ್ದೇವ, ೧೩ ಪ್ರಸೇನಜಿತ್, ೧೪ ನಾಭಿರಾಜ.

## ೧೨ ಚಕ್ರವರ್ತಿಗಳು.

೧ ಭರತ, ೨ ಸಗರ, ೩ ಮಘವಾ, ೪ ಸನತ್ಕುಮಾರ, ೫ ಶಾಂತಿನಾಥ, ೬ ಕುಂಥುನಾಥ, ೭ ಅರನಾಥ, ೮ ಸುಭೌಮ, ೯ ಪದ್ಮನಾಭ, ೧೦ ಹರಿಷೇಣ, ೧೧ ಜಯಸೇನ, ೧೨ ಬ್ರಹ್ಮದತ್ತ.

## ನವವಾಸುದೇವರು ( ನಾರಾಯಣ ).

೧ ತ್ರಿಪಿಷ್ಟ, ೨ ದ್ವಿಪಿಷ್ಟ, ೩ ಸ್ವಯಂಭೂ, ೪ ಪುರುಷೋತ್ತಮ, ೫ ನರಸಿಂಹ, ೬ ಪುಂಡರೀಕ, ೭ ದತ್ತದೇವ, ೮ ಲಕ್ಷ್ಮಣ, ೯ ಕೃಷ್ಣ.

## ನವ ಪ್ರತಿವಾಸುದೇವರು ( ಪ್ರತಿ ನಾರಾಯಣ. )

೧ ಅಶ್ವಗ್ರೀವ, ೨ ತಾರಕ, ೩ ಮೇರಕ, ೪ ನಿಸುಂಭ, ೫ ಮಧುಕೈಟಭ, ೬ ಪ್ರಲ್ಹಾದ, ೭ ಬಲೀ, ೮ ರಾವಣ, ೯ ಜರಾಸಂಧ.

## ನವ ಬಲಿಭದ್ರರು,

೧ ವಿಜಯ, ೨ ಅಚಲ, ೩ ಧರ್ಮಪ್ರಭ, ೪ ಸುಪ್ರಭ, ೫ ಸುದರ್ಶನ, ೬ ನಂದೀ, ೭ ನಂದಿಮಿತ್ರ, ೮ ರಾಮಚಂದ್ರ, ೯ ಪದ್ಮ, ( ಬಲಿಭದ್ರ ).

## ನವ ನಾರದರು.

೧ ಭೀಮ, ೨ ಮಹಾಭೀಮ, ೩ ರುದ್ರ, ೪ ಮಹಾರುದ್ರ, ೫ ಕಾಲ, ೬ ಮಹಾಕಾಲ, ೭ ದುರ್ಮುಖ, ೮ ನರಕಮುಖ, ೯ ಅಧೋಮುಖ.

## ೧೧ ರುದ್ರರು.

೧ ಭೀಮಬಲೀ, ೨ ಜಿತಶತ್ರು, ೩ ರುದ್ರ, ೪ ವಿಶ್ವಾನಲ, ೫ ಸುಪ್ರತಿಷ್ಠ, ೬ ಅಚಲ, ೭ ಪುಂಡರೀಕ, ೮ ಅಜಿತಂಧರ, ೯ ಜಿತನಾಭಿ, ೧೦ ಪೀಠ, ೧೧ ಸಾತ್ಯಕೀ.

## ಏಳು ನರಕಗಳು.

೧ ರತ್ನಪ್ರಭಾ, ೨ ಶರ್ಕರಾಪ್ರಭಾ, ೩ ವಾಲುಕಾಪ್ರಭಾ, ೪ ಪಂಕಪ್ರಭಾ, ೫ ಧೂಮಪ್ರಭಾ, ೬ ತಮಪ್ರಭಾ, ೭ ಮಹಾತಮಪ್ರಭಾ.

## ೧೬ ಸ್ವರ್ಗಗಳು.

೧ ಸೌಧರ್ಮ, ೨ ಈಶಾನ, ೩ ಸನತ್ಕುಮಾರ, ೪ ಮಾಹೇಂದ್ರ ೫ ಬ್ರಮ್ಹ, ೬ ಬ್ರಮ್ಹೋತ್ತರ, ೭ ಲಾಂತವ, ೮ ಕಾಪಿಷ್ಠ, ೯ ಶುಕ್ರ, ೧೦ ಮಹಾಶುಕ್ರ, ೧೧ ಶತಾರ, ೧೨ ಸಹಸ್ರಾರ, ೧೩ ಆನತ, ೧೪ ಪ್ರಾಣತ, ೧೫ ಆರಣ, ೧೬ ಅಚ್ಯುತ.

## ೧೪ ನದಿಗಳು.

೧ ಗಂಗಾ, ೨ ಸಿಂಧು, ೩ ರೋಹಿತ್, ೪ ರೋಹಿತಾಸ್ಯಾ, ೫ ಹರಿತ್, ೬ ಹರಿಕಾಂತಾ, ೭ ಸೀತಾ, ೮ ಸೀತೋದಾ, ೯ ನಾರೀ, ೧೦ ನರಕಾಂತಾ, ೧೧ ಸುವರ್ಣಕೂಲಾ, ೧೨ ರೂಪ್ಯಕೂಲಾ, ೧೩ ರಕ್ತಾ, ೧೪ ರಕ್ತೋದಾ.

## ೧೬ ಕಾರಣಗಳು.

೧ ದರ್ಶನವಿಶುದ್ಧಿ, ೨ ವಿನಯಸಂಪನ್ನತೆ, ೩ ಶೀಲವ್ರತೇಷ್ವನತಿಚಾರ, ೪ ಅಭೀಕ್ಷ್ಣಜ್ಞಾನೋಪಯೋಗ, ೫ ಸಂವೇಗ, ೬ ಶಕ್ತಿತಸ್ತ್ಯಾಗ, ೭ ತಪ, ೮ ಸಾಧುಸಮಾಧಿ, ೯ ವೈಯ್ಯಾವೃತ್ಯ, ೧೦ ಅರ್ಹದ್ಭಕ್ತಿ, ೧೧ ಆಚಾರ್ಯಭಕ್ತಿ, ೧೨ ಬಹುಶ್ರುತಭಕ್ತಿ, ೧೩ ಪ್ರವಚನಭಕ್ತಿ, ೧೪ ಆವಶ್ಯಕಾಪರಿಹಾಣಿ, ೧೫ ಮಾರ್ಗಪ್ರಭಾವನಾ, ೧೬ ಪ್ರವಚನವಾತ್ಸಲ್ಯ.

## ೮ ದ್ವೀಪಗಳು.

೧ ಜಂಬು, ೨ ಧಾತಕೀ, ೩ ಪುಷ್ಕರವರ, ೪ ವಾರುಣೀವರ, ೫ ಕ್ಷೀರವರ, ೬ ಘೃತವರ, ೭ ಇಕ್ಷುವರ, ೮ ನಂದೀಶ್ವರ.

## ಕ್ಷೇತ್ರಗಳು.

೧ ಭರತ, ೨ ಹೈಮವತ, ೩ ಹರಿ, ೪ ವಿದೇಹ, ೫ ರಮ್ಯಕ, ೬ ಹೈರಣ್ಯವತ, ೭ ಐರಾವತ.

## ನಂದೀಶ್ವರ ದ್ವೀಪದೊಳಗಿನ ೫೨ ಪರ್ವತಗಳು.

೧ ಪೂರ್ವಕಡೆಯ ೧೩, ಪಶ್ಚಿಮಕಡೆಯ ೧೩, ಉತ್ತರಕಡೆಯ ೧೩, ದಕ್ಷಿಣಕಡೆಯ ೧೩, ಹೀಗೆ ೫೨ ಪರ್ವತಗಳು.

## ಪ್ರತ್ಯೇಕ ದಿಕ್ಕಿನಲ್ಲಿದ್ದ ೧೩ ಪರ್ವತಗಳ ಹೆಸರು.

ಅಂಜನ ೧, ದಧಿಮುಖ ೪, ರತಿಕರ ೮.

ಇವೇ ಹೆಸರುಗಳು ನಾಲ್ಕೂ ದಿಕ್ಕುಗಳಲ್ಲಿಯ ಪರ್ವತಗಳಿಗೆ ಇದ್ದು, ಪ್ರತ್ಯೇಕ ಪರ್ವತದ ಮೇಲೆ ಒಂದೊಂದು ಜಿನಮಂದಿರವು ಶೋಭಾಯಮಾನವಾಗಿದೆ. ಅವುಗಳಲ್ಲಿ ಒಂದನೂರಾ ಎಂಟು ಪ್ರತಿಮೆಗಳು ವಿರಾಜಮಾನವಾಗಿವೆ.

## ೪ ಪ್ರಕಾರದ ದೇವರು.

೧. ಹತ್ತು ಪ್ರಕಾರದ ಭವನವಾಸೀ ದೇವರು.

೨ ಎಂಟು ಪ್ರಕಾರದ ವ್ಯಂತರ ದೇವರು.

೩. ಐದು ಪ್ರಕಾರದ ಜ್ಯೋತಿಷ ದೇವರು.

೪. ಹದಿನಾರು ಸ್ವರ್ಗಸ್ಥ, ಹದಿನಾರು ಕಲ್ಪವಾಸೀ ದೇವರು ಹೀಗೆ ನಾಲ್ಕೂ ತರದ ದೇವರು ೩೯.

## ೧೦ ಪ್ರಕಾರದ ಭವನವಾಸೀ ದೇವರು.

೧ ಅಸುರಕುಮಾರ, ೨ ನಾಗಕುಮಾರ, ೩ ವಿದ್ಯುತ್ಕುಮಾರ, ೪ ಸುಪರ್ಣಕುಮಾರ, ೫ ಅಗ್ನಿಕುಮಾರ, ೬ ವಾಯುಕುಮಾರ, ೭ ಸ್ತನಿತ ಕುಮಾರ, ೮ ಉದಧಿಕುಮಾರ, ೯ ದ್ವೀಪಕುಮಾರ, ೧೦ ದಿಕ್ಕುಮಾರ.

## ೮ ಪ್ರಕಾರದ ವ್ಯಂತರ ದೇವರು.

೧ ಕಿನ್ನರ, ೨ ಕಿಂಪುರುಷ, ೩ ಮಹೋರಗ, ೪ ಗಂಧರ್ವ, ೫ ಯಕ್ಷ, ೬ ರಾಕ್ಷಸ, ೭ ಭೂತ, ೮ ಪಿಶಾಚ.

## ೮ ಪ್ರಕಾರದ ಬಾಣವ್ಯಂತರ ದೇವರು.

೧ ಅನಪನ್ನೀ, ೨ ಪನಪನ್ನೀ, ೩ ಋಷಿವಾದೀ, ೪ ಭೂತವಾದೀ, ೫ ಕಂದೀತ, ೬ ಮಹಾಕಂದೀತ, ೭ ಕೋಹಂಡ, ೮ ಪತಂಗ.

## ೫ ಪ್ರಕಾರದ ಜ್ಯೋತಿಷ ದೇವರು.

೧ ಸೂರ್ಯ, ೨ ಚಂದ್ರ, ೩ ಗ್ರಹ, ೪ ನಕ್ಷತ್ರ, ೫ ಪ್ರಕೀರ್ಣಕ.

## ೧೬ ಪ್ರಕಾರದ ಕಲ್ಪವಾಸೀ ದೇವರು.

೧ ಸೌಧರ್ಮ, ೨ ಈಶಾನ, ೩ ಸಾನತ್ಕುಮಾರ, ( ಸನತ್ಕುಮಾರ ಸ್ವರ್ಗದಲ್ಲಿರುವವರು. ) ೪ ಮಾಹೇಂದ್ರ, ೫ ಬ್ರಹ್ಮ, ೬ ಬ್ರಹ್ಮೋತ್ತರ, ೭ ಲಾಂತವ, ೮ ಕಾಪಿಷ್ಠ, ೯ ಶುಕ್ರ, ೧೦ ಮಹಾಶುಕ್ರ, ೧೧ ಶತಾರ, ೧೨ ಸಹಸ್ರಾರ, ೧೩ ಆನತ, ೧೪ ಪ್ರಾಣತ, ೧೫ ಆರಣ ( ಆರಣ ಸ್ವರ್ಗದಲ್ಲಿರು ವವರು ), ೧೬ ಅಚ್ಯುತ. ಈ ಹದಿನಾರು ಸ್ವರ್ಗಗಳ ಮೇಲೆ ೯ ಗ್ರೈವೇಯ ಕಗಳುಂಟು. ಅವುಗಳ ಮೇಲೆ ಐದು ಅನುತ್ತರ ವಿಮಾನಗಳುಂಟು.

## ಪಂಚಾನುತ್ತರ ವಿಮಾನಗಳು.

೧ ವಿಜಯ, ೨ ವೈಜಯಂತ, ೩ ಜಯಂತ, ೪ ಅಪರಾಜಿತ, ೫ ಸರ್ವಾರ್ಥಸಿದ್ಧಿ, ಇವುಗಳ ಮೇಲೆ ೪೫ ಯೋಜನ ವಿಸ್ತಾರವುಳ್ಳ ಸಿದ್ಧಶಿಲೆ ಇರುವದು.

## ಸಪ್ತತತ್ವ ಮತ್ತು ನವಪದಾರ್ಥಗಳು.

೧ ಜೀವ, ೨ ಅಜೀವ, ೩ ಆಶ್ರವ, ೪ ಬಂಧ, ೫ ಸಂವರ, ೬ ನಿರ್ಜರಾ ೭ ಮೋಕ್ಷ.

ಇವೇ ಏಳು ತತ್ವಗಳು. ಇವುಗಳಲ್ಲಿ ಪುಣ್ಯ ಮತ್ತು ಪಾಪ ಕೂಡಿಸಿಸಿದರೆ ನವಪದಾರ್ಥಗಳಾಗುವವು.

## ಹದಿನಾಲ್ಕು ರತ್ನಗಳು.

ಚಂಕ್ರಂ ಛತ್ರಮಸಿರ್ದಂಡೋ
ಮಣಶ್ಚರ್ಮ ಚ ಕಾಕಿಣೀ ॥
ಗೃಹಸೇನಾಪತಿಸ್ತಕ್ಷಾ
ಪುರೋಧೋಶ್ವಗಜ ಸ್ತ್ರಿಯಃ ॥ ೧ ॥

ಅರ್ಥ—೧ ಚಕ್ರ, ೨ ಛತ್ರ, ೩ ಖಡ್ಗ, ೪ ದಂಡ, ೫ ಮಣಿ, ೬ ಚರ್ಮ, ೭ ಕಾಕಿಣೀ, ೮ ಗೃಹ, ೯ ಸೇನಾಪತಿ, ೧೦ ತಕ್ಷಕ, ೧೧ ಪುರೋಹಿತ, ೧೨ ಅಶ್ವ, ೧೩ ಗಜ, ೧೪ ಸ್ತ್ರೀ.

## ನವ ನಿಧಿಗಳು.

ರಕ್ಷಿತಯಕ್ಷಸಹಸ್ರಾಃ ಕಾಲಮಹಾಕಾಲ ಪಾಂಡುಮಾಣವಶಂಖಾಃ ।
ನೈಸರ್ಪಪದ್ಮ ಪಿಂಗಲನಾನಾರತ್ನಾಕ್ಷ ನವನಿಧಯಃ ॥ ೧ ॥
ಋತುಯೋಗ್ಯವಸ್ತುಭಾಜನಧಾನ್ಯಾಯುಧ ತೂರ್ಯಹರ್ಮ್ಯ
ವಸ್ತ್ರಾಣಿ ।
ಆಭರಣರತ್ನನಿಕರಾನ್ ಕ್ರಮೇಣನಿಧಯಃಪ್ರಯಚ್ಛಂತಿ ॥ ೨ ॥

ಅರ್ಥ—೧ ಕಾಲ, ೨ ಮಹಾಕಾಲ, ೩ ಪಾಂಡುಕ, ೪ ಮಾಣವ, ೫ ಶಂಖ, ೬ ನೈಸರ್ಪ, ೭ ಪದ್ಮ, ೮ ಪಿಂಗಲ, ೯ ನಾನಾರತ್ನ.

೧. ಕಾಲನಿಧಿಯು—ಬೇಕಾದ ಪುಸ್ತಕಗಳನ್ನೂ ವಿದ್ಯೆಯನ್ನೂ ಕೊಡುವದು.

೨. ಮಹಾಕಾಲ—ಸುವರ್ಣ ( ಬಂಗಾರ ) ವನ್ನು ಕೊಡುವದು.

೩. ಪಾಂಡುಕ—ಸುಗಂಧವಾದ ಷಡ್ರಸಯುಕ್ತ ಭೋಜನವನ್ನು ಕೊಡುವದು.





೪. ಮಾಣವ—ಶಸ್ತ್ರಾಯುಧ ಕೊಡುವದು.
೫. ಶಂಖ—ವಾದ್ಯಗಳನ್ನು ಕೊಡುವದು.
೬. ನೈಸರ್ಪ-ಪಾತ್ರೆ ಶಯ್ಯಾಸನ ಮಂದಿರಾದಿಗಳನ್ನು ಕೊಡುವದು.
೭. ಪದ್ಮ—ಅಮೌಲ್ಯವಾದ ವಸ್ತ್ರಗಳನ್ನು ಕೊಡುವದು.
೮. ಪಿಂಗಲ—ಸುವರ್ಣ (ಬಂಗಾರ) ದ ಒಡವೆಗಳನ್ನು ಕೊಡುವದು.
೯. ನಾನಾರತ್ನ—ರತ್ನಗಳನ್ನು ಕೊಡುವದು.

## ೧೭ ನಿಯಮಗಳು.

೧ ಭೋಜನವು, ೨ ಸಚಿತ್ರವಸ್ತು, ೩ ಗೃಹ, ೪ ಸಂಗ್ರಾಮ. ೫ ದಿಶಾಗಮನ, ೬ ಔಷಧವಿಲೇಪನ, ೭ ತಾಂಬೂಲ, ೮ ಪುಷ್ಪ ಸುಗಂಧ, ೯ ನೃತ್ಯಾವಲೋಕನ, ೧೦ ಗಾಯನಶ್ರವಣ, ೧೧ ಸ್ನಾನ, ೧೨ ಬ್ರಹ್ಮಚರ್ಯ, ೧೩ ಆಭೂಷಣ, ೧೪ ವಸ್ತ್ರ, ೧೫ ಶಯ್ಯಾ, ೧೬ ಔಷಧಸೇವನ, ೧೭ ವಾಹನ ಕುದುರೆ, ಎತ್ತು ಮುಂತಾದವುಗಳು. ಪ್ರತಿದಿವಸ ಇವುಗಳ ಅಳತೆಯನ್ನೂ ಮಾಡಿಕೊಳ್ಳಬೇಕು.

## ೮ ಪ್ರಕಾರದ ಮದ ( ಗರ್ವ ) ಗಳು.

೧ ಜಾತಿ, ೨ ಕುಲ, ೩ ಶಕ್ತಿ, ೪ ರೂಪ, ೫ ವಿದ್ಯೆ, ೬ ತಪ, ೭ ದ್ರವ್ಯ, ೮ ಐಶ್ವರ್ಯ.

## ಶ್ರಾವಕರ ೨೧ ಗುಣಗಳು.

೧ ಲಜ್ಜೆ, ೨ ದಯೆ, ೩ ಪ್ರಸನ್ನತೆ, ೪ ನಂಬಿಗೆ, ೫ ಪರದೋಷಾಚ್ಛಾದನ, ೬ ಪರೋಪಕಾರ, ೭ ಸೌಮ್ಯದೃಷ್ಟಿ, ೮ ಗುಣಗ್ರಹಣ, ೯ ಶ್ರೇಷ್ಠಪಕ್ಷತೆ, ೧೦ ಮಿಷ್ಟವಾದ, ೧೧ ದೀರ್ಘವಿಚಾರ, ೧೨ ದಾನ, ೧೩ ಶೀಲ, ೧೪ ಕೃತಜ್ಞತೆ, ೧೫ ತತ್ವಜ್ಞತೆ, ೧೬ ಧರ್ಮಜ್ಞತೆ, ೧೭ ಮಿಥ್ಯಾತ್ವಾಭಾವ, ೧೮ ಸಂತೋಷ, ೧೯ ಸ್ಯಾದ್ವಾದಭಾಷಣ, ೨೦ ಅಭಕ್ಷತ್ಯಾಗ, ೨೧ ಷಟ್ಕರ್ಮಪ್ರವೀಣತೆ.

## ನಾಲ್ಕು ವಿಕಥೆಗಳು.

೧ ಸ್ತ್ರೀಕಥೆ, ೨ ಭೋಜನಕಥೆ, ೩ ದೇಶಕಥೆ, ೪ ರಾಜಕಥೆ.

## ಆರು ಸರೋವರಗಳು.

೧ ಪದ್ಮ, ೨ ಮಹಾಪದ್ಮ, ೩ ತಿಗಿಂಛ, ೪ ಕೇಸರೀ, ೫ ಮಹಾ ಪುಂಡರೀಕ, ೬ ಪುಂಡರೀಕ.

## ಏಳು ಪ್ರಕಾರದ ಭಯಂಗಳು.

೧ ಇಹಲೋಕಭಯ, ೨ ಪರಲೋಕಭಯ, ೩ ಅನುರಕ್ಷಕಭಯ, ೪ ಆಕಸ್ಮಾತ್‌ಭಯ, ೫ ವೇದನಾಭಯ, ೬ ಮರಣಭಯ, ೭ ಅಗುಪ್ತಿ ಭಯ.

## ೬ ಭಾಷೆಗಳು.

೧ ಸಂಸ್ಕೃತ, ೨ ಪ್ರಾಕೃತ, ೩ ಶೌರಸೇನಿ, ೪ ಮಾಗಧಿ, ೫ ಪೈಶಾಚೀ ೬ ಅಪಭ್ರಂಶಿಕ.

## ಆರು ಲೇಶ್ಯಗಳು.

೧ ಕೃಷ್ಣ, ೨ ನೀಲ, ೩ ಕಾಪೋತ, ೪ ಪೀತ, ೫ ಪದ್ಮ, ೬ ಶುಕ್ಲ.

## ಕೃಷ್ಣಲೇಶ್ಯಾ.

**ಆರ್ತರೌದ್ರಃ ಸದಾ ಕ್ರೋಧೀ ಮತ್ಸರೋ ಧರ್ಮವರ್ಜಿತಃ ।**
**ನಿರ್ದಯೋ ವೈರಸಂಯುಕ್ತಃ ಕೃಷ್ಣಲೇಶ್ಯಾಯುತೋ ನರಃ ॥ ೧ ॥**

ಅರ್ಥ—ಆರ್ತಧ್ಯಾನದಲ್ಲಿಯೂ, ರೌದ್ರಧ್ಯಾನದಲ್ಲಿಯೂ ಇರುವದು, ಸಿಟ್ಟಾಗುವದು, ಗರ್ವದಿಂದಿರುವದು, ಧರ್ಮಭ್ರಷ್ಟನಾಗುವದು, ನಿರ್ದಯನಾಗುವದು, ವೈರಸಾಧಿಸುವದು ಇವು ಕೃಷ್ಣಲೇಶ್ಯೆಯ ಲಕ್ಷಣಗಳು.

## ನೀಲಲೇಶ್ಯಾ.

**ಅಲಸೋ ಮಂದಬುದ್ಧಿಶ್ಚ ಸ್ತ್ರೀಲುಬ್ಧಶ್ಚ ಪ್ರಪಂಚಕಃ ॥**
**ಕಾತರಶ್ಚ ಸದಾ ಮಾನೀ ನೀಲಲೇಶ್ಯಾಯುತೋ ನರಃ ॥**

ಅರ್ಥ—ಸೋಮಾರಿ, ಮಂದಬುದ್ಧಿ, ಸ್ತ್ರೀಲುಬ್ಧ, ಪ್ರಪಂಚಾಸಕ್ತ, ಅಂಜುಬುರುಕ, ಮಾನವಂತ ಈ ತರದ ಮನುಷ್ಯನು ನೀಲಲೇಶ್ಯೆಯುಳ್ಳವನೆಂದು ತಿಳಿಯಬೇಕು.

## ಕಾಪೋತಲೇಶ್ಯಾ.

**ಶೋಕಾಕುಲಃ ಸದಾರುಷ್ಟಃ ಪರನಿಂದಾತ್ಮಶಂಸಕಃ ॥**
**ಸಂಗ್ರಾಮೇ ಪ್ರಾರ್ಥತೇ ಮೃತ್ಯುಂ ಕಾಪೋತೋಯಮುದೀರ್ಯತೇ ॥ ೩ ॥**

ಅರ್ಥ—ಯಾವಾಗಲೂ ದುಃಖಮಾಡುವ, ಸಿಟ್ಟುಮಾಡುವ, ಎರಡೆ ಸೇಯುವರ ನಿಂದೆ ಮತ್ತು ಆತ್ಮಸ್ತುತಿಮಾಡುವ, ಮತ್ತು ಯುದ್ಧದಲ್ಲಿ ಮರಣವನ್ನು ಬಯಸುವ ಮನುಷ್ಯನು ಕಾಪೋತಲೇಶ್ಯೆಯುಳ್ಳವನು.

### ಪೀತಲೇಶ್ಯಾ.

ಪ್ರಬುದ್ಧಃ ಕರುಣಾಯುಕ್ತೋ ಕಾರ್ಯಾಕಾರ್ಯವಿಚಾರಕಃ ||
ಲಾಭಾಲಾಭೇ ಸದಾ ಪ್ರೀತಃ ಪೀತಲೇಶ್ಯಾಯುತೋನರಃ || ೫ ||

ಅರ್ಥ—ತಿಳುವಳಿಕೆಯುಳ್ಳವ, ದಯಾವಂತ, ಸದಸದ್ವಿಚಾರವುಳ್ಳವ, ಲಾಭಾಲಾಭವಾದರೂ ಯಾವತ್ತು ಸಂತೋಷದಲ್ಲಿರುವಂಥವನು ಪೀತಲೇಶ್ಯೆಯುಳ್ಳವನು.

### ಪದ್ಮಲೇಶ್ಯಾ

ದಯಾಶೀಲಃ ಸದಾ ತ್ಯಾಗೀ ದೇವತಾರ್ಚನತತ್ಪರಃ ||
ಶುಚಿರ್ಭೂತಃ ಸದಾನಂದೋ ಪದ್ಮಲೇಶ್ಯಾಯುತೋನರಃ || ೪ ||

ಅರ್ಥ—ದಯಾವಂತ, ಉದಾರ, ದೇವಪೂಜಾತತ್ಪರ, ಶುದ್ಧ ಮತ್ತು ನಿತ್ಯ ಆನಂದದಲ್ಲಿರುವವನು ಪದ್ಮಲೇಶ್ಯೆಯುಳ್ಳವನು.

### ಶುಕ್ಲ ಲೇಶ್ಯಾ.

ರಾಗದ್ವೇಷವಿನಿರ್ಮುಕ್ತಃ ಶೋಕನಿದ್ರಾವಿವರ್ಜಿತಃ ||
ಪರಾತ್ಮಭಾವಸಂಪನ್ನಃ ಶುಕ್ಲ ಲೇಶ್ಯಾಯುತೋನರಃ || ೫ ||

ಅರ್ಥ— ಸಿಟ್ಟು, ವೈರ, ಶೋಕ ಮತ್ತು ನಿದ್ರೆ ಇವು ಇಲ್ಲದೆ, ಪರಮಾತ್ಮನ ಧ್ಯಾನದಲ್ಲಿ ಲೀನನಾದವನು ಶುಕ್ಲಲೇಶ್ಯೆಯುಳ್ಳವನು.

### ದಾನ, ಶೀಲ, ತಪ ಮತ್ತು ಭಾವ.

ದಾನಂ ದುರ್ಗತಿನಾಶಾಯ ಶೀಲಂ ಸದ್ಗತಿಕಾರಣಂ ||
ತಪಃ ಕರ್ಮವಿನಾಶಾಯ ಭಾವನಾ ಭವನಾಶನೀ ||

ಅರ್ಥ—ದಾನದ ಯೋಗದಿಂದ ದುರ್ಗತಿಯು ನಾಶವಾಗಿ ಉತ್ತಮ ಗತಿಯು ಪ್ರಾಪ್ತವಾಗುತ್ತದೆ; ಶೀಲವನ್ನು ಪಾಲಿಸಿದರೆ ಉತ್ತಮ ಗತಿಯು ಪ್ರಾಪ್ತವಾಗಿ ಕಡೆಗೆ ಸುಖವುಂಟಾಗುವದು; ತಪಸ್ಸಿನಿಂದ ಕರ್ಮವು ನಾಶವಾಗುತ್ತದೆ; ಮತ್ತು ಭಾವನೆಯಿಂದ ಭವಾಂತರವಾಗುವದಿಲ್ಲ.

---

## ಶ್ರಾವಕರ ನಿತ್ಯನಿಯಮಗಳು.

**ದೇವಪೂಜಾ ಗುರೂಪಾಸ್ತಿಃ ಸ್ವಾಧ್ಯಾಯಃ ಸಂಯಮಸ್ತಪಃ ||**
**ದಾನಂ ಚೇತಿ ಗೃಹಸ್ಥಾನಾಂ ಷಟ್ಕರ್ಮಾಣಿ ದಿನೇ ದಿನೆ || ೧ ||**

ಅರ್ಥ—೧ ಶ್ರೀಜಿನೇಶ್ವರನ ಪೂಜೆಯನ್ನು ಮಾಡುವದು; ೨ ನಿಗ್ರಂಥಗುರು (ಮುನಿ) ಗಳ ಸೇವೆಮಾಡುವದು; ೩ ಶಾಸ್ತ್ರಪಠಣ ಮತ್ತು ಶ್ರವಣ ಮಾಡುವದು; ೪ ಸಾಮಾಯಿಕ (ಣಮೋಕಾರಜಪ) ಮಾಡುವದು; ೫ ವ್ರತ, ಉಪವಾಸ ಮುಂತಾದವುಗಳನ್ನು ಮಾಡುವದು; ೬ ಚತುರ್ವಿಧ ಸಂಘಗಳಿಗೆ ಅಥವಾ ಸತ್ಪಾತ್ರರಿಗೆ ದಾನಕೊಡುವದು; ಹೀಗೆ ಆರು ಪ್ರಕಾರದ ನಿಯಮಗಳನ್ನು ಶ್ರಾವಕರು ನಿತ್ಯದಲ್ಲಿಯೂ ಪಾಲಿಸಬೇಕು.

### ಮರುದೇವಿಯು ಕಂಡ ೧೬ ಸ್ವಪ್ನಗಳು.

**ಮಾತಂಗಗೋಹರಿರಮಾವರದಾಮಚಂದ್ರ |**
**ಮಾರ್ತಂಡಮೀನಘಟಯುಗ್ಮತಡಾಗಸಿಂಧು ||**
**ಸಂಹಾಸನಂ ಚ ವರಯಾನಫಣೀಂದ್ರಗೇಹಂ |**
**ಸ್ಯಾದ್ರತ್ನರಾಶಿಹುತಭುಕ್ ಕ್ಷಣದಾಭಿರಾಮಾಃ || ೧ ||**

ಅರ್ಥ—೧ ಆನೆ, ೨ ಎತ್ತು, ೩ ಸಿಂಹ, ೪ ಲಕ್ಷ್ಮಿ, ೫ ರತ್ನಮಾಲಾ, ೬ ಚಂದ್ರ, ೭ ಸೂರ್ಯ, ೮ ಮೀನ, ೯ ಕುಂಭಗಳು ೨, ೧೦ ಕೆರೆ, ೧೧ ಸಮುದ್ರ, ೧೨ ಸಿಂಹಾಸನ, ೧೩ ವಿಮಾನ, ೧೪ ನಾಗೇಂದ್ರಗೃಹ, ೧೫ ರತ್ನದರಾಶಿ, ೧೬ ಅಗ್ನಿಜ್ವಾಲೆ.

### ಏಳು ವ್ಯಸನಗಳು.

**ದ್ಯೂತಂ ಮಾಂಸಂ ಸುರಾ ವೇಶ್ಯಾಪರದಾರಾಭಿಲೋಭನಂ ||**
**ಮೃಗಯಾ ಸಹ ಚೌರ್ಯೇಣ ಸ್ಯುಃಸಪ್ತವ್ಯಸನಾನಿವೈ || ೧ ||**

ಅರ್ಥ—ಜೂಜಾಡುವದು, ಮಾಂಸಭಕ್ಷಣ, ಸರಾಯಿ ಕುಡಿಯುವದು, ವೇಶ್ಯಾಸಂಗ ಮಾಡುವದು, ಬೇಟೆ, ಕಳವು, ಪರಸ್ತ್ರೀಯರನ್ನು ಬಯಸುವದು. ಈ ಏಳು ವ್ಯಸನಗಳನ್ನು ಶ್ರಾವಕನು ಬಿಟ್ಟು ಬಿಡಬೇಕು.

## ೧೪ ಶ್ರೋತೃಭೇದ

**ಮೃಚ್ಚಾಲಿನ್ಯಜಮಾರ್ಜಾರ ಶುಕಕಂಕಶಿಲಾಹಿಭಿಃ ।**
**ಗೋಹಂ ಸಮಹಿಷಚ್ಛಿದ್ರಘಟದಂಶಜಲೂಕಕೈಃ ॥**
**ಶ್ರೋತಾರಃ ಸಮಭಾವಾಃ ಸ್ಯುರುತ್ತಮಾಧಮ ಮಧ್ಯಮಾಃ ।**
**ಅನ್ಯಾದೃಶೋಪಿ ಸಂತ್ಯೇವ ತತ್ಕಿಂತೇಷಾಮಿಯತ್ತಯಾ ॥ ೧ ॥**

ಅರ್ಥ—೧ ಮಣ್ಣು, ೨ ಜಾಣಿಗೆ, ೩ ಆಡು, ೪ ಬೆಕ್ಕು, ೫ ಗಿಳಿಯು, ೬ ಬಕಪಕ್ಷಿಯು, ೭ ಕಲ್ಲು, ೮ ಸರ್ಪ, ೯ ಆಕಳು, ೧೦ ಹಂಸಪಕ್ಷಿ, ೧೧ ಕೋಣ, ೧೨ ಒಡಕುಕೊಡ, ೧೩ ಗುಂಗಾಡು, ೧೪ ಜಿಗಳಿ. ಈ ಹದಿನಾಲ್ಕು ಜಾತಿಗಳಂತೆ ಯಾರ ಸ್ವಭಾವವು ಇರುವದೋ, ಅವರೇ ಶ್ರೋತೃಜನರು ( ಕೇಳುವವರು ). ಇದರಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಹೀಗೆ ಮೂರು ಪ್ರಕಾರಗಳುಂಟು.

**ಗೋಹಂಸಸದೃಶಾನ್ ಪ್ರಾಹುರುತ್ತಮಾನ್ಮೃಚ್ಛುಕೋಪಮಾನ್ ।**
**ಮಧ್ಯಮಾನ್ವಿದುರನ್ಯೈಶ್ಚ ಸಮಕಕ್ಷೋಧಮೋಮತಃ ॥ ೩ ॥**

ಅರ್ಥ— ಆಕಳು ಮತ್ತು ಹಂಸ ಇವುಗಳ ಸ್ವಭಾವದ ಶ್ರೋತೃ ( ಕೇಳುವ ) ಜನರು ಉತ್ತಮರೆಂತಲೂ ಮಣ್ಣು ಮತ್ತು ಗಿಳಿ ಇವುಗಳ ಸ್ವಭಾವದವರು ಮಧ್ಯಮರೆಂತಲೂ ಉಳಿದ ೧೦ ಪ್ರಕಾರದ ಸ್ವಭಾವದವರು ಅಧಮರೆಂತಲೂ ತಿಳಿಯಬೇಕು.

## ೫೭ ಆಸ್ರವಗಳು.

ಪುಣ್ಯ ಮತ್ತು ಪಾಪ ಇವು ಒದಗುವ ಮಾರ್ಗಗಳಿಗೆ ( ಶೆಲಿಗಳಿಗೆ ) ' ಆಸ್ರವ ' ಅನ್ನುವರು. ಅಥವಾ ಕಾಯ, ವಾಕ್, ಮನ, ಇವುಗಳ ಕ್ರಿಯಗಳಿಗೂ ಆಸ್ರವ ಎಂದೆನ್ನುವರು. ಇವು ೫೭ ಉಂಟು. ಅವುಗಳ ವಿವರಃ—

ಮಿಥ್ಯಾತ್ವ ೫, ಅವಿರತ ೧೨, ಕಷಾಯ ೨೫, ಯೋಗ ೧೫.

## ೫ ಮಿಥ್ಯಾತ್ವಗಳು.

೧ ಏಕಾಂತ, ೨ ವಿಪರೀತ, ೩ ವಿನಯ, ೪ ಸಂಶಯ, ೫ ಅಜ್ಞಾನ.

## ೧೨ ಅವಿರತಗಳು.

( ನಿಯಮಗಳನ್ನು ಪಾಲಿಸದಿರೋಣ ).

( ೧ ) ಸ್ಥಾವರ ೫, ( ೨ ) ತ್ರಸ ೧, ( ೩ ) ಪಂಚೇಂದ್ರಿಯ ೫, ( ೪ ) ಮನೋನಿಗ್ರಹ ಮಾಡದೇ ಇರುವದು ೧.

೧ ಪಂಚಸ್ಥಾವರ— ೧ ಪೃಥ್ವೀ, ೨ ಅಪ್, ೩ ತೇಜ, ೪ ವಾಯು, ೫ ವನಸ್ಪತಿ ಈ ಪಂಚಸ್ಥಾವರ ಜೀವಿಗಳ ರಕ್ಷಣ ಮಾಡದಿರೋಣ.

೨ ತ್ರಸ—೧ ದ್ವೀಂದ್ರಿಯ, ೨ ತ್ರೀಂದ್ರಿಯ, ೩ ಚತುರಿಂದ್ರಿಯ, ೪ ಪಂಚೇಂದ್ರಿಯ. ಈ ಜೀವಿಗಳನ್ನು ರಕ್ಷಣೆಮಾಡದಿರೋಣ, ಇದಕ್ಕೆ ತ್ರಸ ಅವಿರತ ಅನ್ನುವರು.

೩ ಪಂಚೇಂದ್ರಿಗಳು—೧ ಸ್ಪರ್ಶ, ನಾಲಿಗೆ, ೩ ಮೂಗು, ೪ ಕಣ್ಣು, ೫ ಕಿವಿ, ಈ ಐದು ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಡದಿರೋಣ. ಇದಕ್ಕೆ ಪಂಚೇಂದ್ರಿಯಾವಿರತಿ ಅನ್ನುವರು.

## ೨೫ ಕಷಾಯಗಳು.

(೧) ಅನಂತಾನುಬಂಧಿ—ಕ್ರೋಧ, ಮಾನ, ಮಾಯಾ, ಲೋಭ ೪.

( ೨ ) ಅಪ್ರತ್ಯಾಖ್ಯಾನ—ಕ್ರೋಧ, ಮಾನ, ಮಾಯಾ, ಲೋಭ, ೪

( ೩ ) ಪ್ರತ್ಯಾಖ್ಯಾನ--ಕ್ರೋಧ, ಮಾನ, ಮಾಯಾ, ಲೋಭ ೪

( ೪ ) ಸಂಜ್ವಲನ—ಕ್ರೋಧ, ಮಾನ, ಮಾಯಾ, ಲೋಭ ೪

( ೫ ) ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಪುರುಷ ವೇದ, ಸ್ತ್ರೀವೇದ, ನಪುಂಸಕವೇದ, ಅಂತೂ ೯ ನೋಕಷಾಯಗಳು.

## ೧೫ ಯೋಗಗಳು

೧ ಸತ್ಯಮನೋಯೋಗ, ೨ ಅಸತ್ಯಮನೋಯೋಗ, ೩ ಉಭಯ ಮನೋಯೋಗ, ೪ ಅನುಭಯಮನೋಯೋಗ, ೫ ಸತ್ಯವಚನಯೋಗ, ೬ ಅಸತ್ಯವಚನಯೋಗ, ೭ ಉಭಯವಚನಯೋಗ, ೮ ಅನುಭಯವ ಚನಯೋಗ, ೯ ಔದಾರಿಕಕಾಯಯೋಗ, ೧೦ ಔದಾರಿಕಮಿಶ್ರಕಾಯ ಯೋಗ, ೧೧ ವೈಕ್ರಿಯಿಕಕಾಯಯೋಗ, ೧೨ ವೈಕ್ರಿಯಿಕಮಿಶ್ರಕಾಯ ಯೋಗ, ೧೩ ಆಹಾರಕಕಾಯಯೋಗ, ೧೪ ಆಹಾರಕಮಿಶ್ರಕಾಯ ಯೋಗ, ೧೫ ಕಾರ್ಮಣಕಾಯಯೋಗ.

## ೫೭ ಸಂವರಗಳು.

ಆಸ್ರವದ ಪ್ರತಿಬಂಧ ಮಾಡುವದಕ್ಕೆ "ಸಂವರ" ಅನ್ನುವರು. ಅದು ಆರು ಪ್ರಕಾರದ್ದುಂಟು.

ಗುಪ್ತಿ ೩, ಸಮಿತಿ ೫, ಧರ್ಮ ೧೦, ಅನುಪ್ರೇಕ್ಷೆಗಳು ೧೨, ಪರಿಷಹಜಯ ೨೨, ಚಾರಿತ್ರ ೫.

### ಮೂರು ಗುಪ್ತಿಗಳು.

ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ.

### ಐದು ಸಮಿತಿಗಳು.

ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನನಿಕ್ಷೇಪಣಾಸಮಿತಿ, ಉತ್ಸರ್ಗಸಮಿತಿ.

### ಹತ್ತು ಧರ್ಮಗಳು.

ಕ್ಷಮಾ, ಮಾರ್ಧವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಆಕಿಂಚನ್ಯ. ಬ್ರಹ್ಮಚರ್ಯ.

### ಹನ್ನೆರಡು ಅನುಪ್ರೇಕ್ಷೆಗಳು.

ಅನಿತ್ಯ ಅಶರಣ, ಸಂಸಾರ, ಏಕತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ದುರ್ಬೋಧ, ಧರ್ಮ.

### ೨೨ ಪರಿಷಹಜಯಗಳು.

ಕ್ಷುಧಾ, ತೃಷಾ, ಶೀತ, ಉಷ್ಣ, ದಂಶಮಶಕ, ನಾಗ್ನ್ಯ, ಅರತಿ, ಸ್ತ್ರೀಚರ್ಯಾ, ನಿಷದ್ಯಾ, ಶಯ್ಯಾ, ಆಕ್ರೋಶ, ವಧ, ಅಯಾಚನೆ, ಅಲಾಭ, ರೋಗ, ತೃಣ, ಸ್ಪರ್ಶ, ಮಲ, ಸತ್ಕಾರ, ಪುರಸ್ಕಾರ, ಪ್ರಜ್ಞಾ, ಅಜ್ಞಾನ, ಅದರ್ಶನ.

### ಐದು ಚಾರಿತ್ರಗಳು.

ಸಾಮಾಯಿಕ, ಛೇದೋಪಸ್ಥಾಪನೆ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತ.

### ಮೂರು ಶಲ್ಯಗಳು.

೧ ಮಾಯಾ ಶಲ್ಯ, ೨ ಮಿಥ್ಯಾ ಶಲ್ಯ, ೩ ನಿದಾನ ಶಲ್ಯ.

## ೪ ಪ್ರಕಾರ ದತ್ತಿಗಳು.

೧ ದಯಾದತ್ತಿ ೨ ಪಾತ್ರದತ್ತಿ ೩ ಸಮದತ್ತಿ ೪ ಸಕಲದತ್ತಿ.

(೧) ದಯಾದತ್ತಿ—ಷಟ್ಕಾಯ ಜೀವಿಗಳ ಮೇಲೆ ದಯೆ ಮಾಡುವದು.

(೨) ಪಾತ್ರದತ್ತಿ—ಸತ್ ಪಾತ್ರರಿಗೆ ಆಹಾರ ಧಾನ್ಯಾದಿಗಳನ್ನು ಕೊಡುವದು.

(೩) ಸಮದತ್ತಿ—ತನ್ನ ಮಗಳನ್ನು ಸರಿಸಮಾನಿಗರಿಗೆ ಕೊಡುವದು.

(೪) ಸಕಲದತ್ತಿ—ತನ್ನ ವಂಶಕ್ಕೆ ಸಂತಾನವಿಲ್ಲದಿರಲು ತನ್ನ ವಂಶಕರಲ್ಲಿ ದತ್ತಕ ತೆಗೆದುಕೊಂಡು ಅವರಿಗೆ ತನ್ನ ಆಸ್ತಿ ಕೊಡುವದು.

## ಸಮ್ಯಕ್ತ್ವಕ್ಕೆ ೨೫ ಮಲ (ದೋಷ) ಗಳು.

### ಮೂರು ಮೂಢಗಳು.

೧ ಲೋಕಮೂಢ, ೨ ದೇವತಾಮೂಢ, ೩ ಪಾಷಂಡಿಮೂಢ.

### ಎಂಟು ಮದಗಳು.

೧ ಜ್ಞಾನಮದ, ೨ ಪೂಜಾಮದ, ೩ ಜಾತಿಮದ, ೪ ಕುಲಮದ, ೫ ಬಲಮದ, ೬ ಐಶ್ವರ್ಯಮದ, ೭ ತಪೋಮದ, ೮ ಶರೀರಮದ.

### ಆರು ಅನಾಯತನ ಸೇವೆಗಳು.

೧ ಮಿಥ್ಯಾದೈವ, ೨ ಮಿಥ್ಯಾಲಯ, ೩ ಮಿಥ್ಯಾಜ್ಞಾನ, ೪ ಮಿಥ್ಯಾಜ್ಞಾನಿ, ೫ ಮಿಥ್ಯಾತಪ, ೬ ಮಿಥ್ಯಾತಪಸ್ವಿ.

### ಶಂಕಾದಿ ೮ ದೋಷಗಳು.

೧ ಶಂಕಾ, ೨ ಕಾಂಕ್ಷಾ, ೩ ವಿಚಿಕಿತ್ಸಾ, ೪ ಮೂಡದೃಷ್ಟಿತ್ವ, ೫ ಅನುಪಗೂಹನ, ೬ ಅಸ್ಥಿತೀಕರಣ, ೭ ಅವಾತ್ಸಲ್ಯ, ೮ ಅಧರ್ಮಪ್ರಭಾವನಾ.

### ಸಮ್ಯಕ್ತ್ವದ ೮ ಅಂಗಗಳು.

೧ ನಿಃಶಂಕಾ, ೨ ನಿಃಕಾಂಕ್ಷಾ, ೩ ನಿರ್ವಿಚಿಕಿತ್ಸಾ, ೪ ಅಮೂಡದೃಷ್ಟಿ, ೫ ಉಪಗೂಹನ, ೬ ಸ್ಥಿತೀಕರಣ, ೭ ವಾತ್ಸಲ್ಯ, ೮ ಪ್ರಭಾವನಾ.

### ಸಮ್ಯಕ್ತ್ವದ ೮ ಗುಣಗಳು.

೧ ಸಂವೇಗ, ೨ ನಿರ್ವೇಗ, ೩ ಆತ್ಮನಿಂದಾ, ೪ ಗರ್ಹಣಾ, ೫ ಉಪಶಮ, ೬ ಅರ್ಹದಾದಿ ಭಕ್ತಿ, ೭ ಅನುಕಂಪಾ, ೮ ಆಸ್ತಿಕ್ಯ.

### ಸಮ್ಯಕ್ತ್ವದ ೫ ಅತಿಚಾರಗಳು,

೧ ಶಂಕಾ, ೨ ಕಾಂಕ್ಷಾ, ೩ ವಿಚಿಕಿತ್ಸಾ, ೪ ಮಿಥ್ಯಾದೃಷ್ಟಿ ಪ್ರಶಂಸಾ, ೫ ಮಿಥ್ಯಾದೃಷ್ಟಿಸ್ತ್ರವನ.

### ಅಭ್ಯಂತರರೂಪವಿನಿಶ್ಚಯ ಧರ್ಮಧ್ಯಾನದ ೪ ಭೇದಗಳು.

೧ ಪದಸ್ಥ, ೨ ಪಿಂಡಸ್ಥ, ೩ ರೂಪಸ್ಥ, ೪ ರೂಪಾತೀತ.

### ೪ ವಿವಿಧ ಶುಕ್ಲಧ್ಯಾನಗಳು.

೧ ಪೃಥಕ್ತ್ವವಿತರ್ಕ ವಿಚಾರ, ೨ ಏಕತ್ವ ವಿತರ್ಕ, ೩ ಸೂಕ್ಷ್ಮಕ್ರಿಯಾ ಪ್ರತಿಪಾತಿ, ೪ ವ್ಯುಪರತಕ್ರಿಯಾನಿವೃತ್ತಿ.

### ೭ ವಿಧದ ತಪಗಳು.

೧ ಉಗ್ರತಪ, ೨ ದೀಪ್ತತಪ, ೩ ತಪ್ತತಪ, ೪ ಮಹಾತಪ, ೫ ಘೋರತಪ, ೬ ಘೋರಗುಣಪರಾಕ್ರಮ, ೭ ಘೋರಗುಣಬ್ರಹ್ಮಚರ್ಯ.

### ೪ ವಿಧದ ಆರಾಧನೆಗಳು

೧ ಜ್ಞಾನಾರಾಧನಾ, ೨ ದರ್ಶನಾರಾಧನಾ, ೩ ತಪಾರಾಧನಾ ೪ ಚರಿತ್ರಾರಾಧನಾ.

### ೭ ಪರಮ ಸ್ಥಾನಗಳು.

೧ ಸಜ್ಜಾತಿ, ೨ ಸದ್ಗೃಹಸ್ಥತ್ವ, ೩ ಪಾರಿವ್ರಾಜ್ಯ, ೪ ಸುರೇಂದ್ರತ್ವ, ೫ ಚಕ್ರವರ್ತಿತ್ವ, ೬ ಆರ್ಹಂತ್ಯ, ೭ ನಿರ್ವಾಣ.

### ೬ ದ್ರವ್ಯಗಳು.

೧ ಜೀವದ್ರವ್ಯ, ೨ ಪುದ್ಗಲದ್ರವ್ಯ, ೩ ಧರ್ಮದ್ರವ್ಯ, ೪ ಅಧರ್ಮ ದ್ರವ್ಯ, ೫ ಆಕಾಶದ್ರವ್ಯ, ೬ ಕಾಲದ್ರವ್ಯ.

### ೫ ಅಸ್ತಿಕಾಯಗಳು.

೧ ಜೀವಾಸ್ತಿಕಾಯ, ೨ ಪುದ್ಗಲಾಸ್ತಿಕಾಯ, ೩ ಧರ್ಮಾಸ್ತಿಕಾಯ, ೪ ಅಧರ್ಮಾಸ್ತಿಕಾಯ, ೫ ಆಕಾಶಾಸ್ತಿಕಾಯ.

### ೭ ತತ್ವಗಳು.

೧ ಜೀವತತ್ವ, ೨ ಅಜೀವತತ್ವ, ೩ ಆಸ್ರವತತ್ವ, ೪ ಬಂಧತತ್ವ, ೫ ಸಂವರತತ್ವ, ೬ ನಿರ್ಜರಾತತ್ವ, ೭ ಮೋಕ್ಷತತ್ವ.

## ೯ ಪದಾರ್ಥಗಳು.

೧ ಜೀವಪದಾರ್ಥ, ೨ ಅಜೀವಪದಾರ್ಥ, ೩ ಆಸ್ರವಪದಾರ್ಥ, ೪ ಪಾಪಪದಾರ್ಥ, ೫ ಪುಣ್ಯಪದಾರ್ಥ, ೬ ಬಂಧಪದಾರ್ಥ, ೭ ಸಂವರಪದಾರ್ಥ, ೮ ನಿರ್ಜರಾಪದಾರ್ಥ, ೯ ಮೋಕ್ಷಪದಾರ್ಥ.

## ೪ ವಿಧದ ನ್ಯಾಸಗಳು

೧ ನಾಮ, ೨ ಸ್ಥಾಪನಾ, ೩ ದ್ರವ್ಯ, ೪ ಭಾವ.

## ೮ ವಿಧದ ಜ್ಞಾನಗಳು.

## ೫ ವಿಧದ ಸದ್‌ಜ್ಞಾನಗಳು.

೧ ಮತಿಜ್ಞಾನ, ೨ ಶ್ರುತಜ್ಞಾನ, ೩ ಅವಧಿಜ್ಞಾನ, ೪ ಮನಃಪರ್ಯಯಜ್ಞಾನ, ೫ ಕೇವಲಜ್ಞಾನ.

## ೩ ವಿಧದ ಅಜ್ಞಾನಗಳು.

೧ ಕುಮತಿ, ೨ ಕುಶ್ರುತ, ೩ ಕುಅವಧಿ ( ವಿಭಂಗ ).

## ಸಪ್ತನಯಗಳು.

೧ ನೈಗಮ, ೨ ಸಂಗ್ರಹ, ೩ ವ್ಯವಹಾರ, ೪ ಋಜುಸೂತ್ರ, ೫ ಶಬ್ದ, ೬ ಸಮಭಿರೂಢ, ೭ ಏವಂಭೂತ.

## ಸಪ್ತಭಂಗಿ ( ಸ್ಯಾದ್ವಾದ )

೧ ಸ್ಯಾದಸ್ತಿ, ೨ ಸ್ಯಾನ್ನಾಸ್ತಿ, ೩ ಸ್ಯಾದಸ್ತಿನಾಸ್ತಿ, ೪ ಸ್ಯಾದವಕ್ತವ್ಯಂ, ೫ ಸ್ಯಾದಸ್ತ್ಯವಕ್ತವ್ಯಂ, ೬ ಸ್ಯಾನ್ನಾಸ್ತ್ಯವಕ್ತವ್ಯಂ, ೭ ಸ್ಯಾದಸ್ತಿನಾಸ್ತ್ಯವಕ್ತವ್ಯಂ.

# ಶ್ರಾವಕರ ೫೩ ಕ್ರಿಯೆಗಳು.

ಗುಣವಯ ತವ ಸಮ ಪಡಿಯಾ |
ದಾನಂ ಜಲಗಾಲಣಂ ಅಣತ್ಥಮಿಯಂ ||
ದಂಸಣ ಣಾನ ಚರಿತಂ |
ಕಿರಿಯಾ ತೇವನ್ನ ಸಾವಯಾ ಭಣಿಯಾ || ೧ ||

ಅರ್ಥ—ಗುಣ ಅಂದರೆ ೮ ಮೂಲಗುಣಗಳು, ವಯ=ಹನ್ನೆರಡು ವ್ರತಗಳು, ತವ=ಹನ್ನೆರಡು ತಪಗಳು, ಸಮ=ಸಾಮ್ಯ ( ಸಮಭಾವ, ) ಪಡಿಯಾ=ಹನ್ನೊಂದು ಪ್ರತಿಮೆಗಳು, ದಾನಂ=೪ ದಾನಗಳು, ಜಲಗಾಲಣಂ=ನೀರು ಸೋಸುವ ಕ್ರಿಯೆ, ಅಣತ್ಥಮಿಯಂ=ಅನ್ನಶೋಧನಕ್ರಿಯೆ, ದಂಸಣ=ದರ್ಶನ, ಣಾನ=ಜ್ಞಾನ, ಚರಿತಂ=ಚಾರಿತ್ರ, ಕಿರಿಯಾ=ಕ್ರಿಯಾ, ತೇವನ್ನ=೫೩ ಸಾವಯಾ=ಶ್ರಾವಕರ, ಭಣಿಯಾ=ಹೇಳಿರುತ್ತವೆ.

## ಮೇಲೆ ಹೇಳಿದ ೫೩ ಕ್ರಿಯೆಗಳ ವರ್ಣನವು.

### ಮೂಲಗುಣಗಳು ೮.

ಅತ್ತಿ, ಆಲ, ಅರಳಿ, ಬಸರಿ, ಗೋಳಿ, ಈ ಪಂಚ ಔದುಂಬರಗಳನ್ನೂ ಮೂರು ಮಕಾರಗಳನ್ನೂ ಅಂದರೆ ಮದ್ಯ, ಮಾಂಸ, ಮತ್ತು ಜೇನತುಪ್ಪ ಇವುಗಳನ್ನು ವರ್ಜಿಸುವದು.

## ೧೨ ವ್ರತಗಳು.

### ೫ ಅಣುವ್ರತಗಳು.

೧ ಅಹಿಂಸಾ, ೨ ಸತ್ಯ, ೩ ಅಚೌರ್ಯ, ೪ ಬ್ರಹ್ಮಚರ್ಯ, ೫ ಪರಿಗ್ರಹಪರಿಮಾಣ.

### ೩ ಗುಣವ್ರತಗಳು.

೧ ದಿಗ್ವ್ರತ, ೨ ದೇಶವ್ರತ, ೩ ಅನರ್ಥದಂಡವಿರತಿ.

### ೪ ಶಿಕ್ಷಾವ್ರತಗಳು.

೧ ಸಾಮಾಯಿಕ, ೨ ಪ್ರೋಷಧೋಪವಾಸ, ೩ ಭೋಗೋಪಭೋಗ ಪರಿಮಾಣ, ೪ ಅತಿಥಿಸಂವಿಭಾಗ.

## ೧೨ ತಪಗಳು.

### ೬ ಬಾಹ್ಯ ತಪಗಳು.

೧ ಅನಶನ, ೨ ಅವಮೋದರ್ಯ ( ಅಲ್ಪಾಹಾರ, ) ೩ ವೃತ್ತಪರಿಸಂಖ್ಯಾನ, ೪ ರಸಪರಿತ್ಯಾಗ, ೫ ವಿವಿಕ್ತಶಯ್ಯಾಸನ, ೬ ಕಾಯಕ್ಲೇಶ.

### ೬ ಅಂತರ ತಪಗಳು.

೧ ಪ್ರಾಯಶ್ಚಿತ, ೨ ವಿನಯ, ೩ ವೈಯ್ಯಾವೃತ್ಯ, ೪ ಸ್ವಾಧ್ಯಾಯ, ೫ ಉತ್ಸರ್ಗ, ೬ ಧ್ಯಾನ.

## ೧೧ ಪ್ರತಿಮೆಗಳು.

೧ ದರ್ಶನ, ೨ ವ್ರತ, ೩ ಸಾಮಾಯಿಕ, ೪ ಪ್ರೋಷಧೋಪವಾಸ, ೫ ಸಚಿತ್ತತ್ಯಾಗ, ೬ ರಾತ್ರಿಭೋಜನತ್ಯಾಗ, ೭ ಬ್ರಹ್ಮಚರ್ಯ, ೮ ಆರಂಭತ್ಯಾಗ, ೯ ಪರಿಗ್ರಹತ್ಯಾಗ, ೧೦ ಅನುಮತಿತ್ಯಾಗ, ೧೧ ಉದ್ದಿಷ್ಟತ್ಯಾಗ.

## ನಾಲ್ಕು ದಾನಗಳು.

೧ ಆಹಾರದಾನ, ೨ ಔಷಧದಾನ, ೩ ಶಾಸ್ತ್ರದಾನ, ೪ ಅಭಯದಾನ.

## ಪಂಚಪರಮೇಷ್ಠಿಗಳ ಗುಣಗಳು.

ಅರಹಂತಾ ಛಯ್ಯಾಲಾ |
ಸಿದ್ಧಾ ಅಠ್ಠೇವ ಸೂರ ಛತ್ತೀಸಾ ||
ಉವಝ್ಝಾಯಾ ಪಣವೀಸಂ |
ಸಾಹೂಣಂ ಹುಂತಿ ಅಡವೀಸಾ || ೧ ||

ಅರ್ಥ—ಅರಹಂತರ ಗುಣಗಳು ೪೬. ಸಿದ್ಧರ ಗುಣಗಳು ೮. ಆಚಾರ್ಯರ ಗುಣಗಳು ೩೬. ಉಪಾಧ್ಯಾಯರ ಗುಣಗಳು ೨೫. ಸರ್ವಸಾಧುಗಳ ಗುಣಗಳು ೨೮. ಒಟ್ಟುಗೂಡಿ ೧೪೩ ಗುಣಗಳು.

## ಅರಹಂತರ ಗುಣಗಳು.

ವರ ಅಯಿಸಯು ಚೌತೀಸಾ |
ಅಠ್ಠ ಮಹಾಪಾಡಿಹಾರ ಸಂಜುತ್ತಾ ||
ಅನಂತ ಚವುಠ್ಠಯು ಸಹಿಯಾ ||
ಛಯ್ಯಾಲಾ ಅರಹಂತಗುಣಾ ಭಣಿಯಾ || ೧ ||

ಅರ್ಥ—ಅತಿಶಯ ೩೪, ಪ್ರಾತಿಹಾರ್ಯ ೮, ಅನಂತಚತುಷ್ಟಯ ೪, ಅಂತೂ ಗುಣಗಳು ೪೬.

## ೩೪ ಅತಿಶಯಗಳು.

### ದೇಹದ ಗುಣಗಳು.

ನಿತ್ಯಂ ನಿಸ್ವೇದತ್ವಂ |
ನಿರ್ಮಲತಾ ಕ್ಷೀರಗೌರರುಧಿರತ್ವಂ ಚ ||
ಸಾಧ್ವಾಕೃತಿಸಂಹನನೇ |
ಸೌರೂಪ್ಯಂ ಸೌರಭಂ ಚ ಸೌಲಕ್ಷಣ್ಯಂ || ೧ ||

ಅಪ್ರಮಿತವೀರ್ಯತಾ ಚ ।
ಪ್ರಿಯಹಿತವಾದಿತ್ವಮನ್ಯದಮಿತಗುಣಸ್ಯ ॥
ಪ್ರತಿಥಾ ದಶಸಂಖ್ಯಾತಾಃ ।
ಸ್ವತಿಶಯಧರ್ಮಾಃ ಸ್ವಯಂಭುವೋ ದೇಹಸ್ಯ ॥ ೨ ॥

ಅರ್ಥ—೧ ಬೆವರು ಇಲ್ಲದ ಶರೀರವುಳ್ಳ, ೨ ಮಲಮೂತ್ರ ರಹಿತ, ೩ ರಕ್ತವು ಹಾಲಿನಂತೆ, ೪ ಸಮಚತುರಸಂಸ್ಥಾನವುಳ್ಳ, ೫ ವಜ್ರವೃಷಭ ನಾರಾಚಸಂಹನನವುಳ್ಳ, ೬ ಸುಂದರ, ೭ ಸುಗಂಧಿ, ೮ (೧೦೦೮) ಶುಭ ಲಕ್ಷಣಗಳುಳ್ಳ, ೯ ವಿಶೇಷಬಲ, ೧೦ ಪ್ರಿಯಹಿತವಾದಿ.

ಗವ್ಯೂತಿಶತಚತುಷ್ಟಯ ।
ಸುಭಿಕ್ಷತಾ ಗಗನಗಮನಮಪ್ರಾಣಿವಧಃ ॥
ಭುಕ್ತ್ಯುಪಸರ್ಗಾಭಾವ- ।
ಶ್ಚತುರಾಶತ್ವಂ ಚ ಸರ್ವವಿದ್ಯೇಶ್ವರತಾ ॥ ೩ ॥
ಅಚ್ಛಾಯತ್ವಮಪಕ್ಷ್ಮ- ।
ಸ್ಪಂದಶ್ಚ ಸಮಪ್ರಸಿದ್ಧನಖಕೇಶತ್ವಂ ॥
ಸ್ವತಿಶಯಗುಣಾ ಭಗವತೋ ।
ಘಾತಿಕ್ಷಯಜಾ ಭವಂತಿ ತೇಪಿ ದಶೈವ ॥ ೪ ॥

ಅರ್ಥ--೧ ಶತಯೋಜನ ಸುಭಿಕ್ಷತೆ, ೨ ಆಕಾಶಗಮನ, ೩ ಅಹಿಂಸಾ ೪ ಆಹಾರರಹಿತ, ೫ ಉಪಸರ್ಗಾಭಾವ, ೬ ಚತುರ್ಮುಖ, ೭ ಸಮಸ್ತ ವಿದ್ಯಗಳಿಗೆ ಸ್ವಾಮಿಯು, ೮ ಛಾಯಾರಹಿತ, ೯ ಪಕ್ಷ್ಮಸ್ಪಂದರಹಿತ, ೧೦ ನಖಕೇಶಗಳು ಬೆಳೆಯುವದಿಲ್ಲ.

## ದೇವಕೃತ ೧೪.

೧ ಸರ್ವಾರ್ಥಮಾಗಧೀಭಾಷಾ. ೨ ಸರ್ವಜೀವಮೈತ್ರಿ, ೩ ಸರ್ವರ್ತು ಫಲಯುಕ್ತವೃಕ್ಷ, ೪ ಆದರ್ಶ ಸಮಭೂಮಿ, ೫ ಸುಗಂಧ ವಾಯು, ೬ ಸರ್ವಜೀವಾನಂದ, ೭ ನಿಷ್ಕಂಟಕಯೋಜನ ಭೂಮಿ, ೮ ಗಂಧೋದಕ ವೃಷ್ಟಿ, ೯ ಪಾದನ್ಯಾಸಪದ್ಮ, ೧೦ ಧಾನ್ಯಸಂಪನ್ನಭೂಮಿ, ೧೧ ಆಕಾಶ ನಿರ್ಮಲತಾ, ೧೨ ದೇವಾಗಮನ, ೧೩ ಧರ್ಮಚಕ್ರ, ೧೪ ಅಷ್ಟದ್ರವ್ಯ.

## ಅಷ್ಟಪ್ರಾತಿಹಾರ್ಯ.

ಅಶೋಕವೃಕ್ಷಃ ಸುರಪುಷ್ಪವೃಷ್ಟಿ- ।
ರ್ದಿವ್ಯಧ್ವನಿಶ್ಚಾಮರಮಾಸನಂ ಚ ॥
ಭಾಮಂಡಲಂ ದುಂದುಭಿರಾತಪತ್ರಂ ।
ಸತ್ಪ್ರಾತಿಹಾರ್ಯಾಣಿ ಜಿನೇಶ್ವರಾಣಾಮ್ ॥

ಅರ್ಥ—೧ ಅಶೋಕವೃಕ್ಷ, ೨ ಸುರಪುಷ್ಪವೃಷ್ಟಿ, ೩ ದಿವ್ಯಧ್ವನಿ, ೪ ಚಾಮರ, ೫ ಸಿಂಹಾಸನ, ೬ ಭಾಮಂಡಲ, ೭ ದುಂಧುಭಿ, ೮ ಮೂರು ಛತ್ರಗಳು.

## ಅನಂತ ಚತುಷ್ಟಯ.

೧ ಅನಂತದರ್ಶನ, ೨ ಅನಂತಜ್ಞಾನ, ೩ ಅನಂತಸುಖ, ೪ ಅನಂತ ವೀರ್ಯ.

ಹೀಗೆ ಅರಹಂತರ ಗುಣಗಳು ೪೬ ಇರುತ್ತವೆ.

## ಶ್ಲೋಕ.

ಕ್ಷುಧಾ ತೃಷಾ ಭಯಂ ದ್ವೇಷೋ ।
ರಾಗೋ ಮೋಹಶ್ಚ ಚಿಂತನಂ ॥
ಜರಾ ರುಜಾ ಚ ಮೃತ್ಯುಶ್ಚ ।
ಸ್ವೇದಃ ಖೇದೋ ಮದೋ ರತಿಃ ॥ ೧ ॥
ವಿಸ್ಮಯೋ ಜನನಂ ನಿದ್ರಾ ।
ವಿಷಾದೋಽಷ್ಟಾದಶ ಧ್ರುವಾಃ ॥
ಏಭಿರ್ದೋಷೈರ್ವಿನಿರ್ಮುಕ್ತಃ ।
ಸೋಽಯಮಾಪ್ತೋ ನಿರಂಜನಃ ॥ ೨ ॥

ಅರ್ಥ—ಹಸಿವೆ, ನೀರಡಿಕೆ, ಅಂಜಿಕೆ, ವೈರ ಅಥವಾ ತಿರಸ್ಕಾರ, ಪ್ರೀತಿ, ಮೋಹ, ಚಿಂತೆ, ಮುಪ್ಪು, ಬೇನೆ, ಸಾವು, ಬೆವರು, ದುಃಖ, ಗರ್ವ, ಕಾಮಸೇವನ, ಆಶ್ಚರ್ಯ, ಹುಟ್ಟುವಿಕೆ, ನಿದ್ರೆ, ಹಳಹಳಿ. ಇವೇ ಹದಿನೆಂಟು ದೋಷಗಳು. ಇವು ಇಲ್ಲದವನೇ ದೋಷರಹಿತನಾದ ಪರ ಮಾತ್ಮನು.

## ಸಿದ್ಧರ ಗುಣಗಳು ೮.

ಸಮ್ಮತ್ತಣಾಣದಂಸಣವೀರಿಯಸುಹವಂ ತಹೇವ ಅವಗಹಣಮ್ ।
ಆಗುರುಲಘುಮವ್ವಾ ಬಾಹಂ ಅಟ್ಠಗುಣಾ ಹುಂತಿ ಸಿದ್ಧಾಣಮ್ ॥

ಅರ್ಥ-ಸಮ್ಯಗ್ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ಚಾರಿತ್ರ, ವೀರ್ಯ, ಸೂಕ್ಷ್ಮತ್ವ, ಅಗುರುತ್ವ, ಅಲಘುತ್ವ, ಅವ್ಯಾಬಾಧತೆ.

---

## ಆಚಾರ್ಯರ ಗುಣಗಳು ೩೬.

ಬಾರಹ ತವ ಛಾವಸ್ಸಯ ।
ಪಂಚಾಚಾರಾ ತಹೇವ ದಹಧಮ್ಮಾ ॥
ಗುತ್ತಿತ್ತಯ ಸಂಜುತ್ತಾ ।
ಛತ್ತೀಸಗುಣಾ ಹುಂತಿ ಆಯರಿಯಾ ॥ ೧ ॥

ಅರ್ಥ—ತಪ ೧೨, ಆವಶ್ಯಕ ೬, ಆಚಾರ ೫, ಧರ್ಮ ೧೦, ಗುಪ್ತಿ ೩, ಅಂತೂ ೩೬ ಗುಣಗಳು.

**ತಪ ೧೨.** ( ೭೭ನೇ ಪುಟ ನೋಡು. )

**ಆವಶ್ಯಕ ೬.**

೧ ಸಾಮಾಯಿಕ, ೨ ಪ್ರತಿಕ್ರಮಣ, ೩ ಪ್ರತ್ಯಾಖ್ಯಾನ, ೪ ಸ್ತವನ, ೫ ವಂದನ, ೬ ಕಾಯೋತ್ಸರ್ಗ.

**ಆಚಾರ ೫.**

೧ ದರ್ಶನಾಚಾರ, ೨ ಜ್ಞಾನಾಚಾರ, ೩ ಚಾರಿತ್ರಾಚಾರ, ೪ ತಪಾಚಾರ, ೫ ವೀರ್ಯಾಚಾರ.

**ಧರ್ಮ ೧೦.**

೧ ಕ್ಷಮಾ, ೨ ಮಾರ್ದವ, ೩ ಆರ್ಜವ, ೪ ಸತ್ಯ, ೫ ಶೌಚ, ೬ ಸಂಯಮ, ೭ ತಪ, ೮ ತ್ಯಾಗ, ೯ ಆಕಿಂಚನ್ಯ, ೧೦ ಬ್ರಹ್ಮಚರ್ಯ.

**ಗುಪ್ತಿ ೩.**

೧. ಮನೋಗುಪ್ತಿ, ೨ ವಚನಗುಪ್ತಿ, ೩ ಕಾಯಗುಪ್ತಿ.

---

## ಉಪಾಧ್ಯಾಯರ ಗುಣಗಳು ೨೫.

ಇಗ್ಯಾ ಅಂಗೇ ಸಹಿಯಾ ।
ಚೌದಸ ಪುವ್ವೇ ಯಶೇಷಾಣಂ ॥
ಪಣವೀಸಾ ಗುಣ ಜುತ್ತಾ ।
ಅನ್ನಾ ತಸ್ಸ ಉತ್ತರ ಉವಝಾಯಾ ॥ ೧ ॥

ಅರ್ಥ—ಅಂಗ ೧೧, ಪೂರ್ವ ೧೪, ಅಂತೂ ೨೫

### ೧೧ ಅಂಗಗಳು.

೧ ಆಚಾರಾಂಗ, ೨ ಸೂತ್ರಕೃತಾಂಗ, ೩ ಸ್ಥಾನಾಂಗ, ೪ ಸಮವಾಯಾಂಗ, ೫ ವ್ಯಾಖ್ಯಾಪ್ರಜ್ಞಪ್ತ್ಯಂಗ, ೬ ಜ್ಞಾತೃಕಥಾಂಗ, ೭ ಉಪಾಸಕಾಧ್ಯಯನಾಂಗ, ೮ ಅಂತಕೃತದಶಾಂಗ, ೯ ಅನುತ್ತರೌಪಪಾದಿಕದಶಾಂಗ, ೧೦ ಪ್ರಶ್ನವ್ಯಾಕರಣಾಂಗ, ೧೧ ವಿಪಾಕಸೂತ್ರಾಂಗ.

### ೧೪ ಪೂರ್ವಗಳು

೧ ಉತ್ಪಾದಪೂರ್ವ, ೨ ಅಗ್ರಾಯಣಿಪೂರ್ವ, ೩ ವೀರ್ಯಾನುವಾದಪೂರ್ವ, ೪ ಅಸ್ತಿನಾಸ್ತಿಪೂರ್ವ, ೫ ಜ್ಞಾನಪ್ರವಾದಪೂರ್ವ, ೬ ಸತ್ಯಪ್ರವಾದಪೂರ್ವ, ೭ ಆತ್ಮಪ್ರವಾದಪೂರ್ವ, ೮ ಕರ್ಮಪ್ರವಾದಪೂರ್ವ, ೯ ಪ್ರತ್ಯಾಖ್ಯಾನಪೂರ್ವ, ೧೦ ವಿದ್ಯಾನುವಾದಪೂರ್ವ, ೧೧ ಕಲ್ಯಾಣವಾದಪೂರ್ವ, ೧೨ ಪ್ರಾಣವಾದಪೂರ್ವ, ೧೩ ಕ್ರಿಯಾವಿಶಾಲಪೂರ್ವ, ೧೪ ಲೋಕಬಿಂದುಪೂರ್ವ.

---

## ಸರ್ವ ಸಾಧುಗಳ ಗುಣಗಳು ೨೮.

ವಯ ಸಮ ಇಂದ್ರಿಯ ರೋಹೇ ।
ಲೋವೋ ಆವಸ್ಸಯ ಅಚೇಲಮವ್ಹಾಣಂ ॥
ಖಿದಿಸಯಣ ದಂತಧಾವಣ ।
ಠಿದಿಭೋಯಣಮೇಯಭುತ್ತಂ ಚ ॥ ೧ ॥

ಅರ್ಥ—ಮಹಾವ್ರತ ೫, ಸಮಿತಿ ೫, ಇಂದ್ರಿಯನಿರೋಧ ೫, ಆವಶ್ಯಕ ೬, ಲೋಚ, ಅಸ್ನಾನ, ಕ್ಷಿತಿಶಯನ, ಅದಂತಧಾವನ, ಸ್ಥಿತಿಭೋಜನ, ಏಕಭುಕ್ತಿ, ನಗ್ನತ್ವ.

## ಪಂಚ ಮಹಾವ್ರತಗಳು.

೧ ಹಿಂಸಾತ್ಯಾಗ, ೨ ಅಸತ್ಯತ್ಯಾಗ, ೩ ಚೌರ್ಯತ್ಯಾಗ, ೪ ಮೈಥುನತ್ಯಾಗ, ೫ ಪರಿಗ್ರಹತ್ಯಾಗ.

## ಪಂಚ ಸಮಿತಿಗಳು.

೧ ಈರ್ಯಾಸಮಿತಿ, ೨ ಭಾಷಾಸಮಿತಿ, ೩ ಏಷಣಾಸಮಿತಿ, ೪ ಆದಾನನಿಕ್ಷೇಪಣಸಮಿತಿ, ೫ ಉತ್ಸರ್ಗಸಮಿತಿ.

## ಪಂಚೇಂದ್ರಿಯ ನಿರೋಧ.

೧ ಸ್ಪರ್ಶನ, ೨ ರಸನ, ೩ ಘ್ರಾಣ, ೪ ಚಕ್ಷು, ೫ ಶ್ರೋತ್ರ, ಈ ಐದು ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಡುವದಕ್ಕೆ ಪಂಚೇಂದ್ರಿಯ ನಿರೋಧವೆನ್ನುವರು.

## ೬ ಆವಶ್ಯಕಗಳು.

೧ ಸಾಮಾಯಿಕ, ೨ ಪ್ರತಿಕ್ರಮಣ, ೩ ಪ್ರತ್ಯಾಖ್ಯಾನ, ೪ ಸ್ತವನ, ೫ ವಂದನೆ, ೬ ಕಾಯೋತ್ಸರ್ಗ.

## ಉಳಿದ ೭ ಗುಣಗಳು.

೧ ಲೋಚ, ೨ ನಗ್ನತ್ವ, ೩ ಅಸ್ನಾನ, ೪ ಕ್ಷಿತಿಶಯನ, ೫ ಅದಂತಧಾವನ, ೬ ಸ್ಥಿತಿಭೋಜನ, ೭ ಏಕಭುಕ್ತಿ, ಈ ಪ್ರಕಾರ ಸಾಧೂಗಳ ಗುಣಗಳು ೨೮ ಇರುತ್ತವೆ.

## ಕಲ್ಪವೃಕ್ಷ.

( ಇಚ್ಛಿಸಿದ ವಸ್ತುಗಳನ್ನು ಕೊಡುವದು ).

೧ ಮದ್ಯಾಂಗ—ಉತ್ತಮ ಪ್ರಕಾರದ ಮಧುರ ರಸವನ್ನು ಕೊಡುವದು.

೨ ತೂರ್ಯಾಂಗ—ಭೇರಿ ಮುಂತಾದ ನಾನಾ ಪ್ರಕಾರದ ವಾದ್ಯಗಳನ್ನು ಕೊಡುವದು.

೩ ಭೂಷಣಾಂಗ—ನಾನಾಪ್ರಕಾರದ ರತ್ನ ಮುಂತಾದವುಗಳ ಹಾರಗಳನ್ನು ಕೊಡುವದು.

೪ ಕುಸುಮಾಂಗ—ನಾನಾ ಪ್ರಕಾರದ ಪುಷ್ಪಗಳ ಮಾಲೆಗಳನ್ನು ಕೊಡು ವದು.

೫ ದೀಪ್ತ್ಯಂಗ—ಚಂದ್ರನಹಾಗೆ ಶೀತಲವಾದ ಪ್ರಕಾಶವನ್ನು ಕೊಡುವದು.

೬ ಜ್ಯೋತಿರಂಗ—ಸೂರ್ಯನಂಥ ಪ್ರಕಾಶವನ್ನು ಕೊಡುವದು.

೭ ಗೃಹಾಂಗ—ನಾನಾ ಪ್ರಕಾರದ ಉತ್ತಮವಾದ ಗೃಹ ( ಮನೆ )ಗಳನ್ನು ಕೊಡುವದು.

೮ ಭೋಜನಾಂಗ—ಪಂಚಾಮೃತ ಮುಂತಾದ ಭೋಜನವನ್ನು ಕೊಡು ವದು.

೯ ಭಾಜನಾಂಗ—ನಾನಾ ಪ್ರಕಾರದ ಪಾತ್ರೆಗಳನ್ನು ಕೊಡುವದು.

೧೦ ವಸ್ತ್ರಾಂಗ—ಉತ್ತಮ ವಸ್ತ್ರಗಳನ್ನು ಕೊಡುವದು.

## ೮ ಕರ್ಮಗಳು ಮತ್ತು ಅವುಗಳ ೧೪೮ ಪ್ರಕೃತಿಗಳು.

### ( ೮ ಕರ್ಮಗಳು ).

೧ ಜ್ಞಾನಾವರ್ಣೀಯ, ೨ ದರ್ಶನಾವರ್ಣೀಯ, ೩ ವೇದನೀಯ, ೪ ಮೋಹನೀಯ, ೫ ಆಯುಃ, ೬ ನಾಮ, ೭ ಗೋತ್ರ, ೮ ಅಂತರಾಯ.

### ೧೪೮ ಪ್ರಕೃತಿಗಳು.

### ( ಜ್ಞಾನಾವರ್ಣೀಯ ಕರ್ಮದ ೫ ಪ್ರಕೃತಿಗಳು. )

೧ ಮತಿಜ್ಞಾನಾವರ್ಣೀಯ, ೨ ಶ್ರುತಜ್ಞಾನಾವರ್ಣೀಯ, ೩ ಅವಧಿ ಜ್ಞಾನಾವರ್ಣೀಯ, ೪ ಮನಃಪರ್ಯಾಯ ಜ್ಞಾನಾವರ್ಣೀಯ, ೫ ಕೇವಲ ಜ್ಞಾನಾವರ್ಣೀಯ.

### ( ೨ ) ದರ್ಶನಾವರ್ಣೀಯ ೯ ಪ್ರಕೃತಿಗಳು.

೧ ಚಕ್ಷುದರ್ಶನಾವರ್ಣೀಯ, ೨ ಅಚಕ್ಷುದರ್ಶನಾವರ್ಣೀಯ, ೩ ಅವಧಿ ದರ್ಶನಾವರ್ಣೀಯ, ೪ ಕೇವಲದರ್ಶನಾವರ್ಣೀಯ, ೫ ನಿದ್ರಾದರ್ಶನಾ ವರ್ಣೀಯ, ೬ ನಿದ್ರಾನಿದ್ರಾದರ್ಶನಾವರ್ಣೀಯ, ೭ ಪ್ರಚಲಾದರ್ಶನಾವ ರ್ಣೀಯ, ೮ ಪ್ರಚಲಾಪ್ರಚಲಾದರ್ಶನಾವರ್ಣೀಯ, ೯ ಸ್ತ್ಯಾನಗೃದ್ಧಿದರ್ಶ ನಾವರ್ಣೀಯ,

## ( ೩ ) ವೇದನೀಯ ಕರ್ಮದ ೨ ಪ್ರಕೃತಿಗಳು.

೧ ಸಾತಾವೇದನೀಯ, ೨ ಅಸಾತಾವೇದನೀಯ.

## ( ೪ ) ಮೋಹನೀಯ ಕರ್ಮದ ೨೮ ಪ್ರಕೃತಿಗಳು.

( ಇವುಗಳಲ್ಲಿ ಎರಡು ಪ್ರಕಾರ. )

ದರ್ಶನಮೋಹನೀ ೩; ಚಾರಿತ್ರಮೋಹನೀ ೨೫.

### ದರ್ಶನಮೋಹನೀ ಮೂರು ಪ್ರಕೃತಿಗಳು.

೧ ಸಮ್ಯಕ್ತ್ವಮೋಹನೀಯ, ೨ ಮಿತ್ರಮೋಹನೀಯ, ೩ ಮಿಥ್ಯಾತ್ವ ಮೋಹನೀಯ.

### ಚಾರಿತ್ರಮೋಹನೀಯ ೨೫ ಪ್ರಕೃತಿಗಳು

೧ ಅನಂತಾನುಬಂಧಿ ಕ್ರೋಧ, ೨ ಅನಂತಾನುಬಂಧಿ ಮಾನ, ೩ ಅನಂತಾನುಬಂಧಿ ಮಾಯಾ, ೪ ಅನಂತಾನುಬಂಧಿ ಲೋಭ, ೫ ಅಪ್ರತ್ಯಾಖ್ಯಾನ ಕ್ರೋಧ, ೬ ಅಪ್ರತ್ಯಾಖ್ಯಾನ ಮಾನ, ೭ ಅಪ್ರತ್ಯಾಖ್ಯಾನ ಮಾಯಾ, ೮ ಅಪ್ರತ್ಯಾಖ್ಯಾನ ಲೋಭ, ೯ ಪ್ರತ್ಯಾಖ್ಯಾನ ಕ್ರೋಧ, ೧೦ ಪತ್ಯಾಖ್ಯಾನ ಮಾನ, ೧೧ ಪ್ರತ್ಯಾಖ್ಯಾನ ಮಾಯಾ, ೧೨ ಪ್ರತ್ಯಾಖ್ಯಾನ ಲೋಭ, ೧೩ ಸಂಜ್ವಲನ ಕ್ರೋಧ, ೧೪ ಸಂಜ್ವಲನ ಮಾನ, ೧೫ ಸಂಜ್ವಲನ ಮಾಯಾ, ೧೬ ಸಂಜ್ವಲನ ಲೋಭ, ೧೭ ಹಾಸ್ಯ, ೧೮ ರತಿ, ೧೯ ಅರತಿ, ೨೦ ಶೋಕ, ೨೧ ಭಯ, ೨೨ ಜುಗುಪ್ಸೆ, ೨೩ ಸ್ತ್ರೀವೇದ, ೨೪ ಪುರುಷವೇದ ೨೫ ನಪುಂಸಕವೇದ.

## ( ೫ ) ಆಯುಃಕರ್ಮದ ೪ ಪ್ರಕೃತಿಗಳು.

೧ ದೇವಾಯು, ೨ ಮನುಷ್ಯಾಯು, ೩ ತಿರ್ಯಂಚಾಯು, ೪ ನರಕಾಯು.

## ನಾಮಕರ್ಮದ ಮೂರು ಪ್ರಕೃತಿಗಳು.

( ಇವುಗಳಲ್ಲಿ ಎರಡು ಭೇದ ).

೧ ಪಿಂಡಪ್ರಕೃತಿ, ೨ ಅಪಿಂಡ ಪ್ರಕೃತಿ.

ಪಿಂಡಪ್ರಕೃತಿಯ ಮೂಲಭೇದ ೧೪, ಉತ್ತರ ಭೇದಗಳು ೬೫.

## ( ೧೪ ಮೂಲ ಭೇದಗಳು. )

ಗಯಿ ಜಾಯಿ ತಣು ಉಅಂಗಾ ।
ಬಂಧನಸಂಘಾಯಣಾಣಿ ಸಂಘಯಣಾ ॥
ಸಂಠಾಣಂ ವಣ್ಣಗಂಧಂ ।
ರಸ ಫಾಸಅನುಪುವ್ವೀ ವಿಹಗಯೀ ॥ ೧ ॥

ಅರ್ಥ—ಗತಿ ೪, ಜಾತಿ ೫, ಶರೀರ ೫, ಅಂಗೋಪಾಂಗ ೩, ಬಂಧನ ೫, ಸಂಘಾತ ೫, ಸಂಹನನ ೬, ಸಂಸ್ಥಾನ ೬, ವರ್ಣ ೫, ಗಂಧ ೨, ರಸ ೫, ಸ್ಪರ್ಶ ೮, ಅನುಪೂರ್ವೀ ೪, ವಿಹಾಯೋಗತಿ ೨, ಹೀಗೆ ಮೂಲ ಭೇದಗಳು ೧೪.

**ಮೂಲಭೇದ ಪೃಥಕ್ಕರಣ ಅಂದರೆ ಉತ್ತರ ಭೇದ ೬೫ ಪ್ರಕಾರ.**

**೪ ಗತಿಗಳು.**

೧ ದೇವಗತಿ, ೨ ಮನುಷ್ಯಗತಿ, ೩ ತಿರ್ಯಂಚಗತಿ, ೪ ನರಕಗತಿ.

**೫ ಜಾತಿಗಳು.**

೧ ಏಕೇಂದ್ರಿಯ, ೨ ದ್ವೀಂದ್ರಿಯ, ೩ ತ್ರೀಂದ್ರಿಯ, ೪ ಚತುರಿಂದ್ರಿಯ, ೫ ಪಂಚೇಂದ್ರಿಯ.

**೫ ಶರೀರಗಳು.**

೧ ಔದಾರಿಕ ಅಂಗೋಪಾಂಗ, ೨ ವೈಕ್ರಿಯಿಕ, ೩ ಆಹಾರಕ, ೪ ತೈಜಸ, ೫ ಕಾರ್ಮಣ,

**೩ ಅಂಗೋಪಾಂಗಗಳು.**

೧ ಔದಾರಿಕ ಅಂಗೋಪಾಂಗ, ೨ ವೈಕ್ರಿಯಿಕ ಅಂಗೋಪಾಂಗ, ೩ ಆಹಾರಕ ಅಂಗೋಪಾಂಗ,

**೫ ಬಂಧನಗಳು.**

೧ ಔದಾರಿಕ ಬಂಧನ, ೨ ವೈಕ್ರಿಯಿಕ ಬಂಧನ, ೩ ಆಹಾರಕಬಂಧನ, ೪ ತೈಜಸ ಬಂಧನ, ೫ ಕಾರ್ಮಣಬಂಧನ.

**೫ ಸಂಘಾತಗಳು.**

೧ ಔದಾರಿಕ ಸಂಘಾತ, ೨ ವೈಕ್ರಿಯಿಕ ಸಂಘಾತ, ೩ ಆಹಾರಕ ಸಂಘಾತ, ೪ ತೈಜಸ ಸಂಘಾತ, ೫ ಕಾರ್ಮಣ ಸಂಘಾತ.

## ೬ ಸಂಹನನ.

೧ ವಜ್ರವೃಷಭನಾರಾಚಸಂಹನನ, ೨ ವಜ್ರನಾರಾಚಸಂಹನನ, ೩ ನಾರಾಚಸಂಹನನ, ೪ ಅರ್ಧನಾರಾಚಸಂಹನನ, ೫ ಕೀಲಕಸಂಹನನ, ೬ ಸ್ಫಟಿಕ ಸಂಹನನ.

## ೬ ಸಂಸ್ಥಾನ.

೧ ಸಮಚತುರ ಸಂಸ್ಥಾನ, ೨ ನ್ಯಗ್ರೋಧಸಂಸ್ಥಾನ, ೩ ಸಾಂತಿಕ ಸಂಸ್ಥಾನ, ೪ ವಾಮನಸಂಸ್ಥಾನ, ೫ ಕುಬ್ಜಸಂಸ್ಥಾನ, ೬ ಹುಂಡಸಂಸ್ಥಾನ.

## ೫ ವರ್ಣ.

೧ ಕೃಷ್ಣವರ್ಣ, ೨ ಹರಿತವರ್ಣ, ೩ ಪೀತವರ್ಣ, ೪ ರಕ್ತವರ್ಣ, ೫ ಶ್ವೇತವರ್ಣ.

## ೨ ಗಂಧ.

೧ ಸುಗಂಧ, ೨ ದುರ್ಗಂಧ.

## ೫ ರಸ.

೧ ಕಾರ, ೨ ಕಹಿ, ೩ ಉಪ್ಪು, ೪ ಹುಳಿ, ೫ ಸವಿ.

## ೮ ಸ್ಪರ್ಶ.

೧ ಹಗುರು, ೨ ಜಡ, ೩ ಕೋಮಲ, ೪ ಕಠೋರ, ೫ ಶುಷ್ಕ, ೬ ಚಿಕ್ಕಣ, ೭ ಶೀತ, ೮ ಉಷ್ಣ.

## ೪ ಅನುಪೂರ್ವಿ

೧ ದೇವಾನುಪೂರ್ವಿ, ೨ ಮನುಷ್ಯನುಪೂರ್ವಿ, ೩ ತಿರ್ಯಂಚಾನುಪೂರ್ವಿ, ೪ ನರಕಾನುಪೂರ್ವಿ.

## ೨ ವಿಹಾಯೋಗತಿ.

೧ ಶುಭವಿಹಾಯೋಗತಿ, ೨ ಅಶುಭವಿಹಾಯೋಗತಿ.

ಈ ಪ್ರಕಾರ ಪಿಂಡಪ್ರಕೃತಿ ಮೂಲಭೇದ ೧೪, ಉತ್ತರ ಪ್ರಕೃತಿ ಭೇದ ೬೫.

## ಅಪಿಂಡ ಪ್ರಕೃತಿ ಅಥವಾ ಉತ್ತರ ಪ್ರಕೃತಿಗಳು ೨೮.

( ಅಪಿಂಡಪ್ರಕೃತಿ ಮೂಲಭೇದ ಮೂರು. )

ಪ್ರತ್ಯೇಕಪ್ರಕೃತಿ ೮, ತ್ರಸಾದಿಕಪ್ರಕೃತಿ ೧೦, ಸ್ಥಾವರಾದಿಪ್ರಕೃತಿ ೧೦ ಹೀಗೆ ೨೮ ಪ್ರಕೃತಿಗಳು.

## ಪೃಥಕ್ಕರಣ.

### ( ಪ್ರತ್ಯೇಕ ಪ್ರಕೃತಿ ೮ )

೧ ಪರಘಾತನಾಮಕರ್ಮ, ೨ ಉಶ್ವಾಸನಾಮಕರ್ಮ, ೩ ಆತಪ ನಾಮಕರ್ಮ, ೪ ಉದ್ಯೋತನಾಮಕರ್ಮ, ೫ ಅಗುರುನಾಮಕರ್ಮ, ೬ ಅಲಘುನಾಮಕರ್ಮ, ೭ ನಿರ್ಮಾಣನಾಮಕರ್ಮ, ೮ ಉಪಘಾತ ನಾಮಕರ್ಮ.

### ತ್ರಸಾದಿಕ ಪ್ರಕೃತಿ ೧೦.

೧ ತ್ರಸನಾಮಕರ್ಮ, ೨ ಬಾದರನಾಮಕರ್ಮ, ೩ ಪರ್ಯಾಪ್ತ ನಾಮಕರ್ಮ, ೪ ಪ್ರತ್ಯೇಕನಾಮಕರ್ಮ, ೫ ಸ್ಥಿರನಾಮಕರ್ಮ, ೬ ಶುಭ ನಾಮಕರ್ಮ, ೭ ಶುಭಾಂಗನಾಮಕರ್ಮ, ೮ ಸುಸ್ವರನಾಮಕರ್ಮ ೯ ಆದೇಯನಾಮಕರ್ಮ, ೧೦ ಯಶನಾಮಕರ್ಮ.

### ಸ್ಥಾವರಾದಿ ಪ್ರಕೃತಿ ೧೦.

೧ ಸ್ಥಾವರನಾಮಕರ್ಮ, ೨ ಸೂಕ್ಷ್ಮನಾಮಕರ್ಮ, ೩ ಅಪರ್ಯಾಪ್ತನಾಮಕರ್ಮ, ೪ ಸಾಧಾರಣನಾಮಕರ್ಮ, ೫ ಅಸ್ಥಿರನಾಮಕರ್ಮ, ೬ ಅಶುಭನಾಮಕರ್ಮ, ೭ ದುರ್ಭಾಗನಾಮಕರ್ಮ, ೮ ದುಸ್ವರನಾಮ ಕರ್ಮ, ೯ ಅನಾದೇಯನಾಮಕರ್ಮ, ೧೦ ಅಪಯಶನಾಮಕರ್ಮ.

ಈ ಪ್ರಕಾರ ಪಿಂಡಪ್ರಕೃತಿ ೬೫, ಮತ್ತು ಅಪಿಂಡಪ್ರಕೃತಿ ೨೮ ಕೂಡಿ ನಾಮಕರ್ಮದ ಪ್ರಕೃತಿಗಳು ೯೩ ಆಗುತ್ತವೆ.

### ಗೋತ್ರಕರ್ಮ ಪ್ರಕೃತಿಗಳು ೨

೧ ಉಚ್ಚಗೋತ್ರ, ೨ ನೀಚಗೋತ್ರ.

### ಅಂತರಾಯಕರ್ಮ ಪ್ರಕೃತಿಗಳು ೫

೧ ದಾನಾಂತರಾಯ, ೨ ಲಾಭಾಂತರಾಯ, ೩ ಭೋಗಾಂತರಾಯ, ೪ ಉಪಭೋಗಾಂತರಾಯ, ೫ ವೀರ್ಯಾಂತರಾಯ.

---

## ಮೌನ ಹಿಡಿಯುವ ವೇಳೆಯು.

ಭೋಜನೇ ವಮನೇ ಸ್ನಾನೇ ।
ಮೈಥುನೇ ಮಲಮೋಚನೇ ॥
ಸಾಮಾಯಿಕೇ ಜಿನಾರ್ಚಾಯಾಂ ।
ಗೃಹ್ಯತಾಂ ಮೌನಸಪ್ತಕಂ ॥ ೧ ॥

ಅರ್ಥ—ಭೋಜನದ ಕಾಲಕ್ಕೆ, ವಾಂತಿ ಆಗುವ ಸಮಯಕ್ಕೆ, ಸ್ನಾನ ಮಾಡುವ ಕಾಲಕ್ಕೆ, ಸ್ತ್ರೀಸಂಭೋಗದ ಕಾಲಕ್ಕೆ, ಶೌಚದ ಕಾಲಕ್ಕೆ, ಮತ್ತು ಜಿನಪೂಜೆ ಮಾಡುವ ಕಾಲಕ್ಕೆ, ಮೌನವನ್ನು ಧರಿಸಬೇಕು. ಮೌನ ಅಂದರೆ ಒಂದೇ ಸ್ಥಳದಲ್ಲಿ ದೇವರ ಧ್ಯಾನ ಮಾಡುತ್ತ ಕೂಡ್ರುವದು. ಆಗ್ಗೆ ಎರಡನೆಯವರ ಸಂಗಡ ಮಾತಾಡದೇ ಇರುವದು.

## ಪ್ರಾಸುಕ ಜಲವು.

ಮುಹೂರ್ತಂ ಗಾಲಿತಂ ತೋಯಂ ।
ಪ್ರಾಸುಕಂ ಪ್ರಹರದ್ವಯಂ ॥
ಉಷ್ಣೋದಕ ಮಹೋರಾಂತ್ರಂ ।
ಪಶ್ಚಾತ್ಸನ್ಮೂರ್ಛನಂ ಭವೇತ್ ॥ ೧ ॥

ಅರ್ಥ—ಸೋಸಿದ ನೀರನ್ನು ಒಂದು ಮುಹೂರ್ತದವರೆಗೆ ಉಪಯೋಗಿಸಬೇಕು. ಇದಕ್ಕೂ ಹೆಚ್ಚು ವೇಳೆ ಇಟ್ಟರೆ, ಅದರಲ್ಲಿ ಸನ್ಮೂರ್ಛನ (ಅಂದರೆ ಕಣ್ಣಿಗೆ ಕಾಣಿಸದಂಥ) ಜೀವಗಳು ಹುಟ್ಟುತ್ತವೆ. 'ಪ್ರಾಸುಕ' ಅಂದರೆ ಸೋಸಿದ ನೀರಲ್ಲಿ ಲವಂಗ ಮುಂತಾದವುಗಳ ಚೂರ್ಣವನ್ನು ಹಾಕಿದರೆ ಅದು ಪ್ರಾಸುಕವಾಗುತ್ತದೆ. ಹೀಗೆ ನೀರನ್ನು ಎರಡು ಪ್ರಹರದವರೆಗೆ ಉಪಯೋಗಿಸಬೇಕು. ಮುಂದೆ ಅದರೊಳಗಾದರೂ 'ಸನ್ಮೂರ್ಛನ'

ಜೀವಗಳು ಹುಟ್ಟುತ್ತವೆ. ಸೋಸಿದ ನೀರನ್ನು ಅದೇ ವೇಳೆಯಲ್ಲಿ ಕಾಸಿ ಬೆಚ್ಚಗೆ ಮಾಡಿ ಆ ನೀರನ್ನು ಒಂದು ದಿವಸ ಮತ್ತು ಒಂದು ರಾತ್ರಿಯತನಕ ಉಪಯೋಗಿಸಬೇಕು. ಎರಡನೇ ದಿವಸ ಅದರೊಳಗಾದರೂ ಸಮ್ಮೂರ್ಛನೆ ಜೀವಗಳು ಹುಟ್ಟುತ್ತವೆ.

## ಶ್ರೀಚಂದ್ರಗುಪ್ತ ರಾಜನಿಗೆ ತೋರಿದ ೧೬ ಸ್ವಪ್ನಗಳೂ ಅವುಗಳ ಫಲಗಳೂ.

೧ ಸ್ವಪ್ನ—ಕಲ್ಪವೃಕ್ಷದ ಮುರಿದ ಟೊಂಗೆಯು ಕಾಣಿಸಿತು.
ಫಲ—ಯಾವ ರಾಜನಾದರೂ ದೀಕ್ಷೆಯನ್ನು ಕೈಕೊಳ್ಳಲಿಕ್ಕಿಲ್ಲ.

೨ ಸ್ವಪ್ನ—ಸೂರ್ಯಾಸ್ತ ಆದದ್ದು ತೋರಿತು.
ಫಲ—ಪಂಚಮ ಕಾಲದಲ್ಲಿ ಅಂಗಪೂರ್ವದ ಜ್ಞಾನ ಉಳಿಯಲಿಕ್ಕಿಲ್ಲ.

೩ ಸ್ವಪ್ನ—ಚಂದ್ರನು ಸಾಣಿಗೆಯ ಹಾಗೆ ಸಛಿದ್ರ ಕಾಣಿಸಿದನು.
ಫಲ—ಜಿನಶಾಸನದಲ್ಲಿ ಅನೇಕ ಭೇದಗಳು ಹುಟ್ಟುವವು.

೪ ಸ್ವಪ್ನ—ಹನ್ನೆರಡು ಫಣೆಯುಕ್ತ ಸರ್ಪವು ತೋರಿತು.
ಫಲ—ಹನ್ನೆರಡು ವರ್ಷಗಳ ವರೆಗೆ ದುರ್ಭಿಕ್ಷ ಬಿದ್ದೀತು.

೫ ಸ್ವಪ್ನ—ದೇವರ ವಿಮಾನವು ಹಿಂದಕ್ಕೆ ಹೋದಂತೆ ತೋರಿತು.
ಫಲ—ಪಂಚಮ ಕಾಲದಲ್ಲಿ ಚಾರಣಮುನಿಗಳೂ ವಿದ್ಯಾಧರರೂ ಈ ಭೂಮಿಯ ಮೇಲೆ ಬರಲಿಕ್ಕಿಲ್ಲ.

೬ ಸ್ವಪ್ನ—ತಿಪ್ಪೆಯ ಮೇಲೆ ಕಮಲೋತ್ಪತ್ತಿಯು ಕಂಡಿತು.
ಫಲ—ವೈಶ್ಯ ಜನರು ಮಾತ್ರ ಜೈನಧರ್ಮವನ್ನು ಪಾಲಿಸುವರು. ಬ್ರಾಹ್ಮಣ ಕ್ಷತ್ರಿಯರು ಪರಮತವನ್ನು ಸ್ವೀಕರಿಸುವರು.

೭ ಸ್ವಪ್ನ—ಪಿಶಾಚ ಸಮೂಹವು ಕುಣಿದಾಡುವದು ಕಂಡಿತು.

ಫಲ—ಈ ಪಂಚಮಕಾಲದಲ್ಲಿಯ ಮನುಷ್ಯರು ಚಂಡಿ ಮುಂಡಿ ಭೈರವ ಮುಂತಾದ ನಾನಾ ಪ್ರಕಾರದ ಕುದೇವರ ಸೇವೆಯಲ್ಲಿದ್ದು ಅನೇಕ ಜೀವಹಿಂಸೆಯನ್ನು ಮಾಡುವರು.

೮ ಸ್ವಪ್ನ—ಹೊನ್ನೇಹುಳವು ಮಿಂಚುವವನ್ನು ಕಂಡನು.

ಫಲ—ಜೈನಧರ್ಮವು ಹೊನ್ನೇ ಹುಳದ ಬೆಳಕಿನಂತೆ ಉಳಿದು, ಅನ್ಯ ಧರ್ಮದ ಪ್ರಸಾರವು ಹೆಚ್ಚಾಗುವದು.

೯ ಸ್ವಪ್ನ—ಸರೋವರವು ಬಹುಶಃ ಒಣಗಿದ ಹಾಗೆ ತೋರಿ ಒಂದೇ ಕಡೆಯಲ್ಲಿ ನೀರು ಕಂಡಿತು.

ಫಲ—ಜಿನೇಶ್ವರರ ಪಂಚಕಲ್ಯಾಣಗಳಾದ ಸ್ಥಳಗಳಲ್ಲಿ ಕೂಡ ಧರ್ಮವು ಕ್ಷೀಣವಾಗುತ್ತ ನಡೆಯುವದು.

೧೦ ಸ್ವಪ್ನ—ಆನೆಯ ಮೇಲೆ ಮಂಗವು ಕೂತದ್ದು ಕಂಡಿತು.

ಫಲ—ಪಂಚಮ ಕಾಲದಲ್ಲಿ ನೀಚಜನರು ರಾಜ್ಯವನ್ನು ಆಳುವರು. ಮತ್ತು ಕ್ಷತ್ರಿಯ ಜನರು ಉಳಿಯಲಿಕ್ಕಿಲ್ಲ.

೧೧ ಸ್ವಪ್ನ—ಬಂಗಾರದ ಪಾತ್ರೆಯಲ್ಲಿ ನಾಯಿಯು ಪಾಯಸವನ್ನು ತಿನ್ನುವಂತೆ ತೋರಿತು.

ಫಲ—ಉತ್ತಮ ಕುಲದಲ್ಲಿಯ ಲಕ್ಷ್ಮಿಯು ನೀಚರಲ್ಲಿ ವಾಸಿಸುವಳು.

೧೨ ಸ್ವಪ್ನ—ಸಮುದ್ರವು ಮರ್ಯಾದೆಯನ್ನು ಬಿಟ್ಟಂತೆ ತೋರಿತು.

ಫಲ—ಪಂಚಮಕಾಲದಲ್ಲಿ ರಾಜರು ಅನ್ಯಾಯೀ ಮತ್ತು ಪಾಪಿಷ್ಟರು ಆಗಿ ಪರವಿತ್ತಾಪಹಾರಕರಾಗುವರು.

೧೩ ಸ್ವಪ್ನ—ಮಹಾರಥಕ್ಕೆ ಕರಗಳನ್ನು ಹೂಡಿದಂತೆ ತೋರಿತು.

ಫಲ—ಜನರು ಮುಪ್ಪಿನ ಕಾಲದಲ್ಲಿ ದೀಕ್ಷೆಯನ್ನು ಪಾಲಿಸಲಿಕ್ಕಿಲ್ಲ. ತರುಣಾವಸ್ಥೆಯಲ್ಲಿ ಕ್ವಚಿತ್ ಯಾರಾದರೂ ದೀಕ್ಷೆಯನ್ನು ಕೈಕೊಳ್ಳುವರು.

೧೪ ಸ್ವಪ್ನ—ರಾಜಪುತ್ರನು ಒಂಟೆಯ ಮೇಲೆ ಕೂತಂತೆ ತೋರಿತು.

ಫಲ—ರಾಜರು ಧರ್ಮ ಮತ್ತು ದಯೆ ಪಾಲಿಸದೆ ಹಿಂಸೆಯನ್ನು ಮಾಡುವರು.

೧೫ ಸ್ವಪ್ನ—ರತ್ನದ ರಾಶಿಯಲ್ಲಿ ಮಣ್ಣು ಕೂಡಿದ್ದು ತೋರಿತು.

ಫಲ—ರಾಜರು ನಿಗ್ರಂಥ ಮುನಿಗಳ ದ್ರೋಹ ಮಾಡುವರು ಮತ್ತು ಯತಿಗಳಲ್ಲಿ ಪರಸ್ಪರ ಸ್ನೇಹ ಉಳಿಯಲಿಕ್ಕಿಲ್ಲ.

೧೬ ಸ್ವಪ್ನ—ಎರಡು ಕರೇ ಆನೆಗಳು ಕಾದಾಡುವದು ಕಂಡಿತು

ಫಲ—ಬೇಕಾದ ಸಮಯದಲ್ಲಿ ಪರ್ಜನ್ಯವೃಷ್ಟಿ ಆಗಲಿಕ್ಕಿಲ್ಲ ಮತ್ತು ನಿಗ್ರಂಥಮುನಿಗಳು ಸಗ್ರಂಥ ಆಗುವರು.

## ಪ್ರಶ್ನೋತ್ತರಗಳು.

ದೇವರು ಯಾರು?—ಶ್ರೀಅರಹಂತರು.

ಸ್ವಧರ್ಮ ಯಾವದು ?—ಷಟ್‌ಕಾಯಜೀವಗಳ ದಯೆಯು.

ಗುರು ಯಾರು —ಹಿತೋಪದೇಶ ಮಾಡುವಂಥ ನಿಗ್ರಂಥಮುನಿಗಳು.

ಜ್ಞಾನಿಗಳು ಯಾರು ?—ಆತ್ಮಬೋಧವುಳ್ಳವರು.

ಸಂಸಾರಭ್ರಮಣವು ಯಾತರಿಂದ?—ಅಜ್ಞಾನದಿಂದ.

ಚೈತನ್ಯ ಲಕ್ಷಣವು ಯಾರದು?—ಜೀವದ್ದು.

ಗುಣವಂತರು ಯಾರು?—ಉತ್ತಮವಾದ ಗುಣಗಳನ್ನು ಪಾಲಿಸುವವರು.

ದರಿದ್ರರು ಯಾರು?—ಲೋಭಿಗಳು.

ಯತಿಗಳು ಯಾರು ?—ಇಂದ್ರಿಯಗಳನ್ನು ಗೆದ್ದಂಥವರು.

ಸಾಧುಗಳು ಯಾರು?—ಸಮತಾಭಾವವುಳ್ಳವರು.

ಶೂರರು ಯಾರು?—ಪರರ ದುಃಖವನ್ನು ನಿವಾರಣ ಮಾಡುವಂಥವರು.

ಪಶುಗಳು ಯಾರು?—ಅವಿವೇಕಿ ( ತಿಳಿಗೇಡಿ ) ಗಳು.

ಬ್ರಾಹ್ಮಣರು ಯಾರು?—ಬ್ರಹ್ಮಜ್ಞಾನಿಗಳು.

ಕ್ಷತ್ರಿಯರು ಯಾರು?—ಕರ್ಮಶತ್ರುಗಳನ್ನು ಗೆದ್ದಂಥವರು.

ವೈಶ್ಯರು ಯಾರು?—ಸ್ವಲಾಭಾಲಾಭವನ್ನು ತಿಳಿಯುವವರು.

ಶೂದ್ರರು ಯಾರು?—ಅಭಕ್ಷ್ಯಭಕ್ಷಣ ಮಾಡುವವರು.

ಅಸ್ಥಿರ ಯಾವದ ?— ಸಂಸಾರವು.

ಸ್ಥಿರ ಯಾವದು?—ಜೀವಹಿತಕಾರಕ ಧರ್ಮವು.

ಅಲ್ಪಸುಖ ಯಾವದು?—ಇಂದ್ರಿಯಗಳಿಂದ ಪ್ರಾಪ್ತವಾದದ್ದು.

ಅನಂತಸುಖ ಯಾವದು ?—ಆತ್ಮನಲ್ಲಿ ಲೀನವಾಗುವದು.

ಉತ್ತಮ ಜಪ ಯಾವದು?—ಣಮೋಕಾರ ಮಂತ್ರವು.

ಪ್ರಬಲ ವೇದನೆ ಯಾವದು?—ಹಸಿವೆ ಮತ್ತು ನೀರಡಿಕೆ.

ಮುಖದ ಭೂಷಣ ಯಾವದು?—ಸತ್ಯನುಡಿ.

ಹಸ್ತಗಳಿಗೆ ಭೂಷಣ ಯಾವದು?—ಸತ್ಪಾತ್ರದಾನ.

ಚರಣಗಳಿಗೆ ಭೂಷಣ ಯಾವದು?—ತೀರ್ಥಯಾತ್ರೆಗಳಿಗೆ ಹೋಗುವದು

ಸ್ತ್ರೀಯರಿಗೆ ಭೂಷಣವು ಯಾವದು?—ಪಾತಿವ್ರತ್ಯ ಧರ್ಮವು.

ಉತ್ತಮ ದಾನವು ಯಾವದು?—ಸುಪಾತ್ರದಾನವು.

ಸ್ವೀಕರಿಸಲಿಕ್ಕೆ ಉತ್ತಮ ಯಾವದು?—ಒಳ್ಳೇತನವು.

ಜನ್ಮಜನ್ಮದ ದುಃಖ ಯಾವದು?—ಅನಂತಪಾಪದ ಬಂಧವು.

ಸಂಸಾರದಲ್ಲಿ ಸುಖವು ಯಾತರಿಂದ ಸಿಗುವದು?—ಸಂತೋಷದಿಂದ.

---

# ಅಂತರಾಯ ಪಾಲಿಸುವ ಕ್ರಮವು.

ಜೈನರು ವ್ರತಗಳಲ್ಲಿ ಅಂತರಾಯಗಳನ್ನು ಪಾಲಿಸಿ ಭೋಜನವನ್ನು ಮಾಡಬೇಕು.

## ದೃಷ್ಟಿಯ ಅಂತರಾಯಗಳು.

ಎಲವು, ಮಾಂಸ, ಕೀವು ಹಸೀ ತೊಗಲು, ವಿಷ್ಟಾ, ಹೆಣ ಇವು ಗಳಲ್ಲಿ ಯಾವದಾದರೂ ದೃಷ್ಟಿಗೋಚರವಾದರೆ ಅದೇ ಸಮಯಕ್ಕೆ ಭೋಜನವನ್ನು ಬಿಡಬೇಕು.

## ಸ್ಪರ್ಶದ ಅಂತರಾಯಗಳು.

ಬೆಕ್ಕು, ನಾಯಿ, ಅಥವಾ ಯಾವದಾದರೊಂದು ಪಂಚೇಂದ್ರಿಯ ಪಶು, ಒಣದೊಗಲು, ಅಮಂಗಲ ಸ್ತ್ರೀ ಪುರುಷ ಇವುಗಳಲ್ಲಿ ಯಾವದಾದರೊಂಪರ ಸ್ಪರ್ಶವಾದರೆ ಅಥವಾ ಭೋಜನದ ಪಾತ್ರೆಯಲ್ಲಿ ಪ್ರಾಣಿಯು ಬಿದ್ದು ಹಿಂಸೆ ಯಾದರೆ ಅದೇ ಕಾಲಕ್ಕೆ ಭೋಜನವನ್ನು ಬಿಡಬೇಕು.

## ಕಿವಿಯ ಅಂತರಾಯಗಳು.

ದೇವರ ಮೂರ್ತಿಯ ಭಂಗವನ್ನಾಗಲೀ ಗುರುಗಳಿಗೆ ದುಷ್ಟರಿಂದ ಪೀಡೆ ಉಂಟಾದ್ದನ್ನಾಗಲೀ, ಶಾಸ್ತ್ರದ ನಾಶವನ್ನಾಗಲಿ, ಹಿಂಸಾಮಯ ವಚನಗಳನ್ನಾಗಲಿ ಕೇಳಿದರೆ ಭೋಜನವನ್ನು ಬಿಡಬೇಕು. ಮತ್ತು ತಾವು ತ್ಯಜಿಸಿದ ಪದಾರ್ಥಗಳಲ್ಲಿ ವಿಸ್ಮರಣೆಯಿಂದ ಯಾವದನ್ನಾದರೂ ತಿಂದರೆ ಸ್ಮರಣೆ ಆದ ಬಳಿಕ ಭೋಜನವನ್ನು ಬಿಡಬೇಕು.

## ವರ್ಜ್ಯ ವಸ್ತುಗಳು.

ಮೌನದಿಂದ ಭೋಜನವನ್ನು ಮಾಡಬೇಕು, ಬ್ರಹ್ಮಚರ್ಯವ್ರತ ವನ್ನು ಪಾಲಿಸಬೇಕು, ನೆಲದ ಮೇಲೆ ಮಲಗಬೇಕು, ಸಚಿತ್ತ ವಸ್ತುಗಳನ್ನು ಸೇವಿಸಬಾರದು, ವ್ಯಾಪಾರ ಮೊದಲಾದ ಕೆಲಸಗಳನ್ನು ಬಿಡಬೇಕು, ಪಾಪ ಕರ್ಮವನ್ನು ಮಾಡಬಾರದು, ರಾಗದ್ವೇಷಗಳನ್ನು ಬಿಡಬೇಕು, ವಿಷಯ ಸುಖದ ಇಚ್ಛೆ ಮಾಡಬಾರದು, ಈ ಪ್ರಕಾರದ ವ್ರತಗಳನ್ನು ಪಾಲಿಸಿದರೆ ಕ್ರಮದಿಂದ ಮೋಕ್ಷಸುಖವು ದೊರೆಯುವದು.

ಭೋಜನದಲ್ಲಿ ಹೆರಳು ಹೊರಟರೆ ಮುನಿಗಳು ಅಂತರಾಯ ಪಾಲಿಸುವರು. ಆದರೆ ಹೇರಳಿನ ಅಂತರಾಯ ಶ್ರಾವಕನಿಗೆ ಇಲ್ಲ. ಅಂತರಾಯವಾದರೆ ಮುನಿಗಳು ನೀರು ಸಹ ಕುಡಿಯುವದಿಲ್ಲ; ಆದರೆ ಗೃಹಸ್ಥರು ನೀರು ಕುಡಿಯಬಹುದು.

## ಮಂಗಳ ಪದ

### ರಾಗ—ಆನಂದಭೈರವಿ.

ಮಂಗಳಂ ಮಂಗಳಂ ಶಾಂತಿಜಿನಪತೇ । ಮಂಗಳಂ ಮಂಗಳಂ ॥ ಪಲ್ಲ ॥ ಮಂಗಳಮರಕತವಜ್ರವೈಡೂರ್ಯದಿ । ಕಂಗೊಳಿಸುವೆ ಪಚ್ಚೆರತ್ನ ಮೌಕ್ತಿಕದಿಂದ । ಮಂಗಳಂ ಮಂಗಳಂ ॥ ಅ. ಪ. ॥ ಹಸ್ತಿನಪುರಪತಿ ವಿಶ್ವಸೇನನ ಭಾರ್ಯೆ । ಸುಪ್ತದಿಂ ಷೋಡಶ ಸ್ವಪ್ನಗಳನು ಕಾಣೆ । ಸೂತ್ರಾಮನರಶಿ ಶ್ರೀದೇವಿಯರಿಂ ಜಿನ । ಮಾತೃಹೃದಿಯುಶುದ್ಧಿಕಲ್ಯಾಣವೆಸಗಲೂ ॥ ಮಂಗ ॥ ೧ ॥ ನವಮಾಸತೀವಿನೀ ಭುವಿಗವತರಿಸಲು । ಅವಧಿಯೊಳಮರನರಸಿ ಸಹಿತೈತಂದು । ಭವನವಿ ಪ್ರತಿಶಿಶುವಿರಿಸಿ ಮಂದರದೊಳು । ದಿವಿಜವೃಂದದಿ ಕ್ಷೀರಧಾರೆಯ ಪಡೆದನೇ ॥ ಮಂಗ. ॥ ೨ ॥ ಪರಿಣಾಮದೊಳು ಪರಿಪರಿಯ ಸಂಪತ್ತಿನಿಂ । ಧರಣಿಯನಾಳುತ ಧುರಧೀರನೆನಿಸಿರ್ದ । ವರ ತತ್ವಜ್ಞಾನದಿಂ ವೈರಾಗ್ಯಮುದಯಿಸಿ । ಸುರರಿಂದ ಪರಿನಿಷ್ಕ್ರಮಣ ಪಡೆದ ದೇವ ಮಂಗಳಂ ॥ ೩ ॥ ಈರಾರು ತಪದೊಳು ಕ್ರೂರವನಡಗಿಸಿ । ಸಾರಕೇವಲಿಯಾಗಿ ಸಮವಶರಣದೊಳು । ಮೂರುಲೋಕದ ಭವ್ಯಜನರಿಗಮೃತ ಭೋಧ । ಧಾರಿಯೆಂದೆನಿಸಿದ ಧೀರಶಾಂತೀಶಗೇ ॥ ಮಂಗ. ॥ ೪ ॥ ಘಾತಿಗಳೆರಡನು ಘಾತಿಸೆ ಕೈವಲ್ಯ । ನಾಥನಿಗಮರರರ್ಚಿಸೆ ಪಂಚಕಲ್ಯಾಣ । ಖ್ಯಾತಸಾಸಿರದೆಂಟು ನಾಮರೆನಿಪ ಶ್ರೀ । ವೀತರಾಗಗೆ ಗುಣಧಾತ ಶ್ರೀಜಿನರಿಗೇ ॥ ಮಂಗಳಂ ॥ ೫ ॥

---